# ಹನ್ನೊಂದು ಕಡಲು ಭಾವನೆಗಳ ಒಡಲು

ಶಶಾಂಕ.ಎಮ್.ಜಿ



ಹೆಚ್.ಎಸ್.ಆರ್.ಎ. ಪ್ರಕಾಶನ
#2, ಶ್ರೀ ಅನ್ನಪೂರ್ಣೇಶ್ವರಿ ನಿಲಯ, 1ನೇ ಮುಖ್ಯ ರಸ್ತೆ,
ಭೈರವೇಶ್ವರ ನಗರ, ಲಗ್ಗೆರೆ, ಬೆಂಗಳೂರು –560058
ಫೋ : 7892793054

// H.S.R.A PUBLICATIONS
No.2, Sri Annapoorneshwari Nilaya, 1st Main,
Byraveshwara Nagar, Laggere, BANGALORE-560058,
Ph: 7892793054
First Published by HSRA PUBLICATIONS 2018

ISBN: "978-93-88729-01-7"
Price: Rs.80.00
Book No: HSRAKA057

**ಮೊದಲ ಮುದ್ರಣ : ೨೦೧೮**

**ಒಟ್ಟು ಪುಟಗಳು : ೭೨**

**ಪ್ರತಿಗಳ ಸಂಖ್ಯೆ: ೧೦೦೦**

**ಹಕ್ಕುಗಳು: ಶಶಾಂಕ.ಎಮ್.ಜಿ**

**ಮುಖಪುಟ ವಿನ್ಯಾಸ : ಹೆಚ್.ಎಸ್.ಆರ್.ಎ. ಪ್ರಕಾಶನ**

**ಬಳಸಿದ ಕಾಗದ : ೮೦** GSM MAPLITO

**ಮುದ್ರಣ : ಹೆಚ್.ಎಸ್.ಆರ್.ಎ. ಪ್ರಕಾಶನ.**

**ಬೆಲೆ : ೮೦.೦೦**

**ಶಶಾಂಕ್ ಎಂ.ಜಿ**
S/o ಗುರುಮೂರ್ತಿ ಎಂ.ಕೆ
ಮಾವಿನಸರ, ಹೊನ್ನೇಸರ ಪೋಸ್ಟ್
ಸಾಗರ ತಾಲ್ಲೂಕ್, ಶಿವಮೊಗ್ಗ – ೫೭೭೪೧೭
ಫೋ – ೯೯೦೧೫೫೦೬೭೨

# ಮುನ್ನುಡಿ

ಮೂಲತಹ ನನ್ನ ಆತ್ಮೀಯ ಆದಂತಹ ಹೆಣ್ಣೊಂದು ಕಡಲು ಭಾವನೆಗಳ ಒಡಲು ಈ ಕೃತಿಯ ರಚನಕಾರರಾದ ಶಶಾಂಕ್ ಎಂ.ಜಿ.[ಶಶಿ] ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಮಾವಿನಸರ ವಾಸಿಯಾದ ಇವರಿಗೆ ಹೃದಯ ಪೂರ್ವಕವಾಗಿ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಮ್ಮ ಕನ್ನಡ ನಾಡಿನ ಸಾಹಿತ್ಯವು ಹಲವಾರು ಶತಮಾನಗಳ ಇತಿಹಾಸ ಹಾಗೂ ಮೌಲ್ಯವಿರುವ ಕಾರಣದಿಂದ ಶಾಸ್ತ್ರೀಯ ಸ್ಥಾನಮಾನ ದೊರೆತಿರುವುದು. ಸಾಹಿತ್ಯದಲ್ಲಿನ ಸಾರ ಮತ್ತು ಮಹತ್ವ ಅನೇಕ ಕವಿಗಳ ಅಪಾರವಾದ ಕೊಡುಗೆ ಮುಖ್ಯಕಾರಣವಾಗಿದೆ. ಪ್ರಾಚೀನ ಕಾಲಮಾನ ಘಟ್ಟದಿಂದ ಇಲ್ಲಿಯತನಕ ಸಾವಿರಾರು ಕವಿಗಳು ಸಹಸ್ರಾರು ಗ್ರಂಥಗಳು ವಿಮರ್ಶೆ, ಕನ್ನಡ ವ್ಯಾಕರಣ ಮುಂತಾದ ಕೃತಿಗಳನ್ನು ಕನ್ನಡ ನಾಡಿಗೆ ನೀಡುವುದರ ಮೂಲಕ ಸಾಹಿತ್ಯಕ್ಕೆ ಮೆರಗು ತಂದಿದ್ದಾರೆ. ಹೀಗೆ ನವೋದಯ,ನವ್ಯ,ಪ್ರಗತಿ ಶೀಲ, ದಲಿತ ಬಂಡಾಯ ಎಂಬ ನಾಲ್ಕು ಪ್ರಕಾರಗಳಲ್ಲಿ ವಿವಿಧ ಬಗೆಯ ಈ ಚಿಂತನೆಗಳಿಂದ ಕಥೆ,ಕಾದಂಬರಿ,ಕಾವ್ಯಗಳಲ್ಲಿ ವಿಭನ್ನ ಶೈಲಿಯಲ್ಲಿ ನಿರೂಪಿಸುವ ಪ್ರಯತ್ನ ಮಾಡಿದರೆ.

ವಿಶ್ವಕವಿ ಎಂದೇ ಕರೆಯಲ್ಪಡುವ ಕುವೆಂಪು ಅವರ ಸಾಧನೆ ಮರೆಯಲಾಗದು ಅಂತಹ ಜಿಲ್ಲೆಯಲ್ಲಿ ಆಧುನಿಕ ಕವಿಗಳಲ್ಲಿ ಉದಯೋನ್ಮುಖ ಕವಿಯಾಗಿರುವ ಶಶಾಂಕ. ಎಂ.ಜಿ. ಶಿವಮೊಗ್ಗ ತನ್ನದೇ ಬರವಣಿಗೆಯನ್ನು ರೂಢಿಸಿಕೊಳ್ಳುತ್ತಾ ಸರಿ ಸುಮಾರು ಐವತ್ತು ಕವನಗಳನ್ನು ರಚಿಸಿ ಒಂದು ಕವನ ಸಂಕಲನ ಹೊರತರಲು ಮಾಡಿರುವ ಈ ಪ್ರಯತ್ನಕ್ಕೆ ಮೆಚ್ಚುಗೆ ವ್ಯಕ್ತಪಡಿಸುತ್ತೇನೆ ಹಾಗೆಯೇ ಮುಂದುವರಿಸುತ್ತಾ ಇವರ ಕವನಗಳಲ್ಲಿ ಸಾರವನ್ನು ವಿಮರ್ಶಿಸುತ್ತಾ ಪ್ರಕೃತಿಗೆ ಹೋಲಿಸಿಕೊಳ್ಳುತ್ತಾ ತಮ್ಮ ಪದಗಳಲ್ಲಿ ಒಂದೊಂದೇ ವಿಷಯಗಳನ್ನು ಎಳೆ ಎಳೆಯಾಗಿ ಬಿಡಿಸಿ

ಹೇಳಲಾಗುತ್ತಿದೆ. ಹೆತ್ತಮ್ಮ,ಪ್ರಕೃತಿ, ಕರದಿ ಬಿಂದಿಗೆ, ಗೃಹ, ಮಳೆಗಾಲದ ಮನೆಯ ಅತಿಥಿ, ಓ ನನ್ನ ಕಂದ, ಸಣ್ಣ ಕಳ ಕಳಿಯ ಕೋರಿಕೆ, ಕುವರಿ ನೀ ಬಳಸು ನಿನ್ನ ಕರವ, ನನಗೂ ಒಂದು ಮನಸ್ಸುಂಟು, ನನ್ನ ಮನದಾಳದ ಮಾತು, ಪ್ರಿಯತಮೆಯ ಅಳಲು, ಕೊಳ, ಪುಟ್ಟ ಕಂದನ ಅಳಲು, ಮುಪ್ಪು, ಕೈಯಲ್ಲಿರುವ ವಿಶ್ವ ಕಣ್ಣಿಗೆ ಹಚ್ಚುವ ಹಂಬಲ, ಜೀವನ ಮನುಜನ ಸ್ಥಿತಿ, ಅಮ್ಮ ನನ್ನ ಮುದ್ದು ಅಮ್ಮ ಈ ಎಲ್ಲಾ ಕವತಿಗಳಲ್ಲಿ ಹೆತ್ತಮ್ಮ ಕವಿತೆಯೊಳಗೆ ತಾಯಿ ಕುರಿತಾದ ಅಭಿಮಾನ ಹಾಗೂ ತನ್ನ ಬಾಲ್ಯದ ದಿನಗಳನ್ನು ಹೇಳಿದಾರೆ ಕರದಿ ಬಿಂದಿಗೆಯಲ್ಲಿ ಬದುಕಿನ ನೈಜ ಸಂಬಂಧಗಳ ಕುರಿತಾಗಿ ಹೇಳಿರುವುದು ಸಂತಸದ ಸಂಗತಿಯಾಗಿದೆ ಗೃಹದೊಳಗೆ ಮನೆಯ ಯಜಮಾನನ ಸ್ಥಾನಮಾನಗಳೇನು ಎಂಬುದು ಸವಿವರವಾಗಿ ಶ್ಲಾಘನೆ ವ್ಯಕ್ತಪಡಿಸಿರುತ್ತಾರೆ.

ಈ ರೀತಿಯಾಗಿ ಒಂದೊಂದು ಕವಿತೆಯಲ್ಲಿ ಶೀರ್ಷಿಕೆಗೆ ತಕ್ಕಂತೆ ವಿಚಾರಗಳನ್ನು ಸೂಕ್ಷ್ಮವಾಗಿ ಸಂವೇದನಾ ಶೈಲಿಯ ಮುಖಾಂತರ ಅಭಿವ್ಯಕ್ತವಾಗಿದೆ. ಮನುಷ್ಯನಿಗೆ ಅಗತ್ಯವೆನಿಸುವ ಸಂಬಂಧಗಳ ವಿಷಯಕ್ಕೆ ಅನುಗುಣವಾಗಿ ಈಗಿನ ವಿದ್ಯಮಾನಗಳಿಗೆ ಅನ್ವಿಸಿಕೊಳ್ಳುತ್ತ ಜಾಗತಿಕ ಕಾಲದಲ್ಲಿಯ ಸಮೂಹ ಮಾಧ್ಯಮಗಳಿಗೆ ಸಿಲುಕಿ ಎಲ್ಲವೂ ನಶಿಸಿ ಹೋಗುತ್ತಿರುವ ಹಿನ್ನೆಲೆಯಲ್ಲಿ ಮಾನವಿನ ಮೌಲ್ಯಗಳ ಎತ್ತಿ ಹಿಡಿಯುವ ಪ್ರಯತ್ನ ನನ್ನ ಈ ಕೃತಿಕಾರ ಮಾಡಿರುವುದನ್ನು ಗಮನಿಸಬಹುದು. ಆನಂತರ ಕವಿತೆಗಳನ್ನು ಸಹೃದಯಗನಿಗೆ ಕಾವ್ಯದ ಲಕ್ಷಣಗಳು ಬಹುಬೇಗನೆ ಅರ್ಥವಾಗುವಂತೆ ಯಾವುದೇ ದ್ವಂದ್ವ ವಿಷಯಗಳ ಸೇರ್ಪಡೆ ಮಾಡದೆ ಒಂದೇ ಚಿತ್ತದ ರೀತಿಯಲ್ಲಿ ಕಾವ್ಯವು ತನ್ನ ಸಾಲುಗಳಲ್ಲಿ ಗಟ್ಟಿತನವನ್ನು ಪಡೆದುಕೊಳ್ಳುತ್ತಾ ಸಾಗುತ್ತದೆ. ಇಲ್ಲಿಯ ವಿಶೇಷತೆ ಏನೆಂದರೆ ಪದ ಕಟ್ಟುವ ಹಾಗೂ ಸುಲಲಿತವಾಗಿ ಕಾವ್ಯ ರಚಿಸುವ ಸಾಮರ್ಥ್ಯದಲ್ಲಿ ಈ ಕೃತಿಕಾರನ ಸಾಧನೆ ನಿಜಕ್ಕೂ ಸಂತೋಷ ತಂದು ಕೊಡುತ್ತದೆ.

'ಕೊಳ' ಎಂಬ ಕವಿತೆಯಲಿ ನನ್ನ ಪಾಲಿನ ವಿಮರ್ಶೆಯಲ್ಲಿ ಇಷ್ಟವಾದ ಕಾವ್ಯವಾಗಿದೆ ಅದರ ಸಾಲುಗಳು ಇಂತಿವೆ

**ಅಲ್ಲಿಯುವುದು ಕೊಳ**
**ಕೊಳದಲ್ಲಿರುವುದು ನೀರು**
**ನಿನ್ನ ಕರಸ್ಪರ್ಶದಿ ತಳಿನೀರು**
**ಅಮೃತ ಬಿಂದುವೇ ಆಗಿದೆ**

ಒಬ್ಬ ಪ್ರೇಮಿಯ ಅಂತರಂಗದೊಳಗಿನ ಪ್ರೇಮಾಂಕುರದ ವಿಷಯವನ್ನು ಹೇಗೆ ವ್ಯಕ್ತಪಡಿಸುತ್ತಾನೆಂಬುದು ಈ ಕಾವ್ಯದಲ್ಲಿ ಸೂರೆಗೊಂಡಿದೆ. ಇನ್ನು ಮುಂತಾದ ಕವಿತೆಗಳಾದ ಅಧುನಿಕತೆ, ಹಾಗೆ ಸುಮ್ಮನೆ, ಮನಸ್ಸೆಂಬ ಹೂ, ರಂಗೋಲಿ, ಮನ, ಕವಿ ಕಲ್ಪನೆ, ಬರವಣಿಗೆ,ಪುಟ್ಟಕರು, ನಾ ಕಂಡ ಸ್ಥಳ, ರಾಜ್ಯೋತ್ಸವ, ಮೂಕ ವೇದನೆ, ಆಶಯ, ಬದುಕು, ಹಚ್ಚಹಸಿರು, ಬಣ್ಣ ಬಣ್ಣದ ಕಿವಿ ಓಲೆ, ಜಾತ್ರೆ, ಬಾಲ್ಯ, ಹೆಳವನ ಮನಸ್ಸು, ಮನದ ಅಳಲು, ಅಸ್ತಿತ್ವದ ಹುಡುಕಾಟ, ನನ್ನ ಮುದ್ದು ಅಮ್ಮ, ಬದುಕಿದ ಸ್ಥಳ, ಮನುಜನ ಸ್ಥಿತಿ, ಕೈಯಲ್ಲಿರುವ ವಿಶ್ವ ಕಣ್ಣಿಗೆ ಕಟ್ಟುವ ಹಂಬಲ, ಜೀವನ, ಮುಪ್ಪು. ಈ ಒಟ್ಟಾರೆಯ ಕಾವ್ಯಗಳನ್ನು ಒಳಹೊಕ್ಕು ವಿಮರ್ಶಿಸಿದಾಗ ಬಹಳಷ್ಟು ಕುತೂಹಲಕಾರಿ ಮಾಹಿತಿಯು ದೊರಯುತ್ತದೆ. ಬದುಶಹ ಕವಿಯು ಸಂಬಂಧಕ್ಕೆ ಮನುಜನ ಭಾವಗಳಿಗೆ ಹೆಚ್ಚು ಒತ್ತು ನೀಡಿರುವುದು ಮೇಲ್ನೋಟದಲ್ಲಿ ಗೋಚರಿಸುತ್ತದೆ. ತೀಕ್ಷವಾಗಿ ಅವಲೋಕನೆಮಾಡಿದಾಗ ಕವಿತೆಗಳ ಸಾಲುಗಳು ಎತ್ತ ನೋಡಿದರೂ ಸಹ ಪ್ರೇಮ ವಾತ್ಸಲ್ಯ, ತನ್ನದೇ ಅದೋಗತಿ, ನಶಿಸುತ್ತಿರುವ ಭಾವಗಳು, ಹೆಣ್ಣಿನ ಮೇಲಿನ ಗೌರವ, ತಾಯಿಯ ಮಮತೆ, ಲೋಕದ ಗೊಡವೆಗಳಿಲ್ಲದೇ ಕುಟುಂಬದ ಪರಿಮಿತಿಯಲ್ಲಿರುವ

ಮೌಲ್ಯಗಳ ಕುರಿತಾಗಿ ಹೇಳುವಂತ ರಚನಾ ಸಾಮರ್ಥ್ಯ ಅರಿವಿಗೆ ಬರುತ್ತದೆ. ತನ್ನ ಸುತ್ತಮುತ್ತಲಿನ ಹಬ್ಬ ಹರಿದಿನಗಳ ಬಗ್ಗೆ ಜಾತ್ರೆ ಬಣ್ಣ ಬಣ್ಣದ ಕವಿಯ ಓಲೆ ಹಚ್ಚ ಹಸಿರು ಸಂಪ್ರದಾಯ ಉಳಿವಿನ ಅಂಶಗಳನ್ನು ಬಿತ್ತಿದಾರೆ ಮುಂದುವರಿಯುತ್ತಾ ತಾನು ಸಮಜದಲ್ಲಿ

ಯಾವ ರೀತಿಯಾಗಿ ಜೀವಿಸಿದರೆ ಉತ್ತಮ ಎಂಬ ವಿಚಾರಗಳನ್ನು ಸರಾಗವಾಗಿಯೇ ವಿವರಿಸುತ್ತಾ ಮತ್ತು ತನಗೆ ತಾನೇ ಸಾಟಿ ಬೇರೆ ಯಾರಿಲ್ಲ ಎನ್ನುವಂತಹ ವೇದನೆಯನ್ನು ಹೇಳುತ್ತಿದಾರೆ. ಈ ಕವನಗಳಲ್ಲಿ ಇಷ್ಟವಾದ ಮತ್ತೊಂದ ಕವಿತೆ ಇಂತಿದೆ.

**"ಪುಟ್ಟ ಕರು"**
**'ಆಕಳ ಕರುವೆ ನನ್ನೆಯ ಒಲವೇ**
**ನಿನ್ನ ಮೊಗವು ಎಷ್ಟು ಚೆಂದ**
**ನಿನ್ನ ಪಾದ ಸ್ಪರ್ಶದಿಂದ**
**ಈ ಮನೆಯವರ ಮನಸ್ಸಿಗೆ ಹೇಳಲಾಗದಷ್ಟು**
**ಆನಂದ'**

ತನ್ನಯ ವಾತ್ಸಲ್ಯವನ್ನು ಮುದ್ದು ಮನಸ್ಸಿನ ಹಾಗೆಯೇ ನಿಸ್ವಾರ್ಥ ಪ್ರೀತಿಯ ತೋರುವ ಒಂದು ಕರುವಿನ ಮೇಲಿನ ಅಪಾರವಾದ ಪ್ರೀತಿಯು ಕಾಣುತ್ತದೆ ಅದಕ್ಕೆ ಮಿಗಿಲಾಗಿ ಕಾಲ್ಪನಿಕವಾಗಿ ಊಹಿಸಿಕೊಳ್ಳುತ್ತಾ ಬರೆಯುವುದಕ್ಕಿಂತ ಮುಖ್ಯಾವಾಗಿ ನೈಜ ಭಾವನೆಯ ಕಣ್ಣೆದುರೇ ಕಾಣುವಂತಹ ಮೂಕ ಪ್ರಾಣಿಗಳ ಮೇಲೆಯೇ ತೋರುವ ಅಭಿಮಾನಕ್ಕೆ ಕೊನೆಯಲ್ಲಿ ಬಹುಶಹ ಈ ಕವಿಯು ಪರಿಸರದ ಬಗೆಗಿನ ಕಾಳಜಿ ಪ್ರಾಣಿಗಳ ಕುರಿತಾಗಿ ಒಲವು ತನ್ನ ಅಂತರಾತ್ಮದಲ್ಲಿ ಹುದುಗಿಕೊಂಡಿದ ಎಂದೂ ಕವಿತೆಗಳಲ್ಲಿ ಅಂದರೆ ಪ್ರತಿಯೊಂದು ಕವಿತೆಯಲ್ಲಿಯೂ ತೋರುತ್ತದೆ.

ಕೃತಿಕಾರರಾದ ಶಶಾಂಕ.ಎಂ.ಜಿ. ಇವರ ಮೊದಲ ಪ್ರಯತ್ನದಲ್ಲಿ ಇಷ್ಟೊಂದು ವಾತ್ಸಲ್ಯಯುತ ಸಂಬಂಧಗಳನ್ನು ಅದನ್ನೇ ತಿದ್ದುವ ಕೆಲಸಕ್ಕೆ ಮೆಚ್ಚುಗೆ ವ್ಯಕ್ತಪಡಿಸುತ್ತೇನೆ. ಅಂತೆಯು ಇನಷ್ಟು ಸತ್ವ ಬೇಕಿತ್ತು ಅನಿಸುತ್ತದೆ.ಇಲ್ಲಿಯೂ ಸಹೃದಯನನ್ನು ಕೊಂಚ ಹಿಡಿದು ಓದಿಸುವ ಶೈಲಿಯಲ್ಲಿ ಎಡವಿದ್ದಾರೆ ಎನ್ನಲಾಗಿದೆ. ನಾಲ್ಕರಿಂದ ಐದು ಸಾಲುಗಳಿಂದ ಕೂಡಿದ ಕವಿತೆಯೊಳಗೆ ಹೆತ್ತರಿಂದ ಇಪ್ಪತ್ತು ಹೆಚ್ಚಿನ ಪದಗಳಿರಬೇಕು ಅದು ವಿಷಯಕ್ಕೆ ಪೂರಕವಾಗಿರಬೇಕು ಕಲವೊಂದು ಕವಿತೆಗಳು ಕಥೆಯ ರೂಪದಲ್ಲಿ ಓದಿಸಿಕೊಂಡು

ಸಾಗುತ್ತದೆ. ಇದರಿಂದ ಓದುಗಾರರಿಗೆ ಕಥನ ಕವನಗಳು ಎಂಬಂತೆ ಭಾಸವಾಗುತ್ತದೆ. ಆನಂತರ ಶೀರ್ಷಿಕೆ ಅಡಿಯಲ್ಲಿ ಅದಕ್ಕೆ ಸಂಬಂಧಿಸಿದಂತೆ ವಿಷಯದ ಸಾರ ಸಾಗಲಿ ಹೊರತಾಗಿಯೇ ಬೇರೆ ಬೇರೆ ಅನಗತ್ಯ ವಿಷಯಗಳ ಪ್ರಸ್ತಾವನೆ ಅಷ್ಟು ಶೋಭೆಯಲ್ಲ. ಕವಿತೆಗಳಲ್ಲಿ ಪದಗಳು ಸಾಲುಗಳು ಕಡಿತಗೊಳಿಸಿ ಅದರ ಸ್ಥಳದಲ್ಲಿಯೇ ಹೆಚ್ಚು ಹೆಚ್ಚು ಪರ್ಯಾಯ ಅರ್ಥಗಳನ್ನು ಕೊಡುವ ಪದಗಳಿದ್ದರೆ ನಿಮ್ಮ ಕಾವ್ಯವು ಗಟ್ಟಿತನವನ್ನು ಪಡೆದುಕೊಳ್ಳುತ್ತದೆ.ಆನಂತರ ಪದಪುಂಜ ಅಧಿಕವಿರಲಿ ಪ್ರತಿಯೊಂದು ಕವಿತೆಯಲ್ಲಿ ಪುನರಾವರ್ತನೆಯಾಗದಂತೆ ನೋಡಿಕೊಳ್ಳಬೇಕು.

ಕೊನೆಯದಾಗಿ ಈಗ ತಾನೆ ಬರವಣಿಗೆಯ ಮೂಲಕ ಸಾಹಿತ್ಯಕ್ಕೆ ಹೆಜ್ಜೆಹಾಕಿದ್ದೀರಾ ಮುಂದಿನ ದಿನಗಳಲ್ಲಿ ನಿಮ್ಮ ಸಾಹಿತ್ಯ ಪಯಣ ಯಶಸ್ವಿಯಾಗಲಿ ಕನ್ನಡ ನಾಡಿಗೆ ಅಪಾರವಾದ ಕೊಡುಗೆಯನ್ನು ನೀಡುವ ಕೃತಿಗಳು ಹೊರಹಮ್ಮಲಿ ರಾಷ್ಟ್ರದ್ಯಾಂತ ನಿಮ್ಮ ಹೆಸರು ಪ್ರಖ್ಯಾತವಾಗಲಿ ಮತ್ತೊಮ್ಮೆ ನಿಮ್ಮನ್ನು ಅಭಿನಂದಿಸುತ್ತಾ ಶುಭವಾಗಲೆಂದು ಹಾರೈಸುತ್ತೇನೆ.

ಇಂತಿ

**ಎಸ್.ರಾಜು.ಸೂಲೇನಹಳ್ಳಿ**

ಕಾದಂಬರಿಕಾರರು

ಸೋಲೇನಹಳ್ಳಿ(ಗ್ರಾ) ರಾಯಪುರ(ಪೋ)
ಮೊಳಕಾಲ್ಮೂರು(ತಾ)ಚಿತ್ರದುರ್ಗ(ಜಿ)
ದೂರವಾಣಿ ಸಂಖ್ಯೆ: ೯೭೪೧೫೬೬೩೧೩
Email: rajusulenahally@gmail.com
ಪಿನ್ ಕೋಡ್ ನಂ: ೫೭೭೫೩೫

# ನನ್ನ ಮಾತು

ಬದುಕನ್ನು ಕಟ್ಟಿಕೊಳ್ಳವ ಶೈಲಿಯಲ್ಲಿ ಹೆಣ್ಣೆಂದರೆ ಅದು ಪ್ರಕೃತಿ ಪ್ರತಿ ಜೀವಿಯಲಿ ನಾವು ಕಾಣಬಹುದಾದ ಹೆಣ್ತನ ಆಗಿರಬಹುದು ಹಾಗೂ ಒಂದಿಷ್ಟು ಸಮಾಜದ ಆಗು ಹೋಗುಗಳ ಬಗ್ಗೆ ಒಂದು ಕಿರುಬೆಳಕು ಚೆಲ್ಲುವ ಪ್ರಯತ್ನ.

ಸದಾ ನನ್ನ ಸ್ಫೂರ್ತಿ ಹಾಗೂ ನನ್ನ ಕಾರ್ಯಕ್ಕೆ ಎಲ್ಲಾ ರೀತಿಯ ಸಹಕಾರ ನೀಡುವ ಹೆತ್ತವರು ಅವರಿಗೆ ಉಡುಗರೆಯಾಗಿ ನೀಡಲು ಬಯಸುತ್ತೇನೆ.. ಪ್ರೋತ್ಸಾಹ ಕೊಟ್ಟ ನನ್ನ ಅಣ್ಣನನ್ನು ಅತ್ತಿಗೆಯನ್ನು ಇಂದು ನನ್ನ ನೆನೆಪುಮಾಡಿಕೊಳ್ಳುತ್ತ ಧನ್ಯವಾದ ಹೇಳುತ್ತೇನೆ.

ನನ್ನ ಆತ್ಮೀಯ ಹಾಗೂ ಕಾದಂಬರಿಕಾರರು ಮತ್ತು ನೆಚ್ಚಿನ ಗುರುಗಳು ಹಾಗೂ ಗೆಳೆಯರು ಪ್ರೀತಿಯಿಂದ ನನ್ನ ಕವನಗಳ ತಪ್ಪುಗಳನ್ನು ತಿದ್ದಿ ಮಾರ್ಗದರ್ಶನ ನೀಡಿ ಮುನ್ನುಡಿ ಬರೆದು ಕೊಟ್ಟ ಶ್ರೀಯುತ ಎಸ್. ರಾಜು ಸೂಲೇನಹಳ್ಳಿ ರಾಜ್ಯಾಧ್ಯಕ್ಷರು ಕರುನಾಡ ಹಣತೆ ಕವಿ ಬಳಗ ವೇದಿಕೆ ರಾಜ್ಯ ಘಟಕ ಚಿತ್ರದುರ್ಗ ಇವರಿಗೆ ಹೃದಯ ಪೂರ್ವಕವಾಗಿ ಧನ್ಯವಾದಗಳು ಈ ಸಂದರ್ಭದಲ್ಲಿ ಸಲ್ಲಿಸುತ್ತೇನೆ.

ಕನ್ನಡದ ಕನ್ನಡ ನಾಡಿನ ಸಾಹಿತ್ಯವು ಹಲವಾರು ಶತಮಾನಗಳ ಇತಿಹಾಸ ಹಾಗೂ ಮೌಲ್ಯವಿರುವ ಕಾರಣದಿಂದ ಶಾಸ್ತ್ರೀಯ ಸ್ಥಾನಮಾನ ದೊರೆತಿರುವುದು. ಸಾಹಿತ್ಯದಲ್ಲಿನ ಸಾರ ಮತ್ತು ಮಹತ್ವ ಅನೇಕ ಕವಿಗಳ ಅಪಾರವಾದ ಕೊಡುಗೆ ಮುಖ್ಯಕಾರಣವಾಗಿದೆ. ಪ್ರಾಚೀನ ಕಾಲಮಾನ ಘಟ್ಟದಿಂದ ಇಲ್ಲಿಯತನಕ ಸಾವಿರಾರು ಕವಿಗಳು ಸಹಸ್ರರಾರು ಗ್ರಂಥಗಳು ವಿಮರ್ಶೆ, ಕನ್ನಡ ವ್ಯಾಕರಣ ಮುಂತಾದ ಕೃತಿಗಳನ್ನು ಕನ್ನಡ ನಾಡಿಗೆ ಕೊಡುವುದರ ಮೂಲಕ ಸಾಹಿತ್ಯಕ್ಕೆ ಮೆರಗು ತಂದಿದ್ದಾರೆ. ಹೀಗೆ ನವೋದಯ,ನವ್ಯ,ಪ್ರಗತಿ ಶೀಲ, ದಲಿತ ಬಂಡಾಯ ಎಂಬ ನಾಲ್ಕು ಪ್ರಕಾರಗಳಲ್ಲಿ ವಿವಿಧ ಬಗೆಯ ಈ ಚಿಂತನೆಗಳಿಂದ ಕಥೆ,ಕಾದಂಬರಿ, ಕಾವ್ಯಗಳಲ್ಲಿ ವಿಭನ್ನ

ಶೈಲಿಯಲ್ಲಿ ನಿರೂಪಿಸುವ ಪ್ರಯತ್ನ ಮಾಡಿದರೆ. ನಾನು ಮೊದಲಿನಿಂದಲು ಬರುಯುವ ಹವ್ಯಾಸ ರೂಡಿ ಇಟ್ಟುಕೊಂಡಿದ್ದು ಈಗ ಒಂದಿಷ್ಟು ಪ್ರಬುದ್ಧ ಬರವಣಿಗೆಯಲಿ ನನ್ನನ್ನು ನಾನು ತೊಡಗಿಸಿಕೊಂಡು

ಈ ಸೂಕ್ತ ಸಮಯದಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸುವ ಕಾರ್ಯಕ್ಕೆ ನಾ ಮುಂದಾಗಿರುವೆ. ಈ ಅವಕಾಶವು ಹಿಂದೆಂದು ಒದಗಿ ಬಂದಿರಲಿಲ್ಲ ನನ್ನ ಬರವಣಿಗೆಯ ನೋಡಿ ಪ್ರೋತ್ಸಾಹ ನೀಡುತ್ತ ಈವರೆಗೂ ಹಾರೈಸುತ್ತ ಬಂದ ಎಲ್ಲರೂ ನಿನ್ನ ಬರವಣಿಗೆಯನ್ನು ಪುಸ್ತಕ ಮಾಡಬೇಕೆಂಬ ಸಲಹೆ ನೀಡಿದರು ಆಗ ಈ ಸಣ್ಣ ಪ್ರಯತ್ನಕ್ಕೆ ಕೈ ಹಾಕಿರುವೆ.ಪ್ರಕಟಿಸುವ ಪೂರ್ವದಲಿ ನನ್ನ ಮಿತ್ರರೊಡನೆ ಹಂಚಿಕೊಂಡು ಅಭಿಪ್ರಾಯವ ಸಂಗ್ರಹಿಸಿದ್ದೆ.

ಈ ಸಂದರ್ಭದಲ್ಲಿ ನನಗೆ ಮೊದಲಬಾರಿಗೆ ವೇದಿಕೆ ಕಲ್ಪಿಸಿಕೊಟ್ಟ ಯುವ ಬರಹಗಾರರ ಒಕ್ಕೂಟ ನೆನಪಿಸಿಕೊಳ್ಳುತ್ತ. ಹಾಗೆ ನನ್ನ ಕವನವನ್ನು ಪರಿಗಣಿಸಿ ಕವನ ವಾಚನಕ್ಕೆ ಅವಕಾಶ ಕಲ್ಪಿಸಿದ ಬೆಳಕು ಸಂಸ್ಥೆ ಹಾಗೂ ಅದರ ಎಲ್ಲಾ ಪದಾಧಿಕಾರಿಗಳನ್ನು ನೆನೆಪಿಸಿಕೊಳ್ಳುತ್ತ.

ಕರುನಾಡ ಹಣತೆ ಕವಿ ಬಳಗ ವೇದಿಕೆ ಸಂಸ್ಥಾಪಕರು ಆದ ಕನಕಪ್ರೀತೇಶ್ ಹಾಗೂ ರಾಜ್ಯ ಉಪಾಧ್ಯಕ್ಷರು ಆದ ವೈ. ಜೆ. ಮಹಿಬೂಬ್ ಮತ್ತು ರಾಜ್ಯ ಪ್ರಧಾನ ಕಾರ್ಯದರ್ಶಿಗಳು ಆದ ಅರವಿಂದ್ ಎನ್. ಪಿ. ಶಿವಮೊಗ್ಗ ರಾಜ್ಯ ಸಲಹಾ ಸಮಿತಿ ಅಧ್ಯಕ್ಷರಾದ ಗಣಪತಿ ಛಲವಾದಿ ಹಾಗೆಯೇ ಕರುನಾಡ ಹಣತೆ ಕವಿ ಬಳಗ ವೇದಿಕೆ ಎಲ್ಲಾ ಪದಾಧಿಕಾರಿಗಳಿಗೆ ನನಗೆ ಪ್ರೋತ್ಸಾಹ ಮತ್ತು ಸಹಕಾರ ನೀಡಿದ್ದಕ್ಕೆ ಅನಂತ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಕವಿತೆಗಳಿಗೆ ಹೊಂದುವ ಆಕರ್ಷಕ ಮುಖಪುಟ್ಟವನ್ನು ವಿನ್ಯಾಸ ಮಾಡಿದ ಅಜಯ್ ಕುಮಾರ್ ಅವರಿಗೆ ಧನ್ಯವಾದಗಳು. ನನ್ನ ಬರವಣಿಗೆಯನ್ನು ಪ್ರೋತ್ಸಾಹಿಸಿದ ಎಲ್ಲರಿಗೂ ನೆನಪಿಸಿಕೊಳ್ಳುತ್ತ ಅದರಲ್ಲಿ ನನ್ನನ್ನು ಪ್ರತಿಕ್ಷಣ ಹುರಿದುಂಬಿಸಿದ ಅರುಣ ಕಾಮತ್

ಅವರಿಗೆ ಧನ್ಯವಾದಗಳು. ರಂಗಕರ್ಮಿ ಹಾಗೂ ನಿಗೂಢ ರಾತ್ರಿಯ ಅಜಯ್ ನೀನಾಸಂ ಅವರು ನನಗೆ ಸಲಹೆ ಸೂಚನೆಗಳನ್ನು ನೀಡಿ ನನ್ನ ಬರವಣಿಗೆಯನ್ನು ಹತ್ತಿರದಿಂದ ಪ್ರೋತ್ಸಾಹಿಸಿದವರು ಶ್ರೀಹರ್ಷ ಗೋಭಟ್ಟ(ನೀನಾಸಂ) ಅವರು ನನ್ನನ್ನು ಪ್ರೋತ್ಸಾಹಿಸಿ ಮತ್ತಷ್ಟು ಬರೆಯುವಂತೆ ಮಾಡಿದರು. ಶಿವಮೊಗ್ಗದ ರಂಗತಂಡ ಚೆಲುವರಂಗದ ಸರ್ವ ಸದಸ್ಯರಿಗೆ ಧನ್ಯವಾದಗಳು. ಕಲಾತರಂಗ ಎಂಬ ಶಿವಮೊಗ್ಗ ಈ ಸಂಸ್ಥೆಯನ್ನು ನೆನೆಪಿಸಿಕೊಳ್ಳಲು ಇಷ್ಟಪಡುತ್ತೇನೆ. ಕಲಾತರಂಗ ಹಗೂ ಸರ್ವ ಸದಸ್ಯರಿಗೂ ಧನ್ಯವಾದಗಳು.

ಕಣ್ಣಿಗೆ ಕಾಣದ ಶಕ್ತಿ ನನ್ನ ಬರವಣಿಗೆಗೆ ಬೆಂಬಲ ಸೂಚಿಸುತ್ತ ಸದಾ ನನ್ನ ಒಳಿತನ್ನು ಬಯಸಿ ಬೆಂಬಲಿಸುತ್ತ ಬಂದ ರವಿಚಂದ್ರ ಅವರನ್ನು ಈ ಸುಸಂದರ್ಭದಲ್ಲಿ ನೆನೆಪಿಸುಕೊಳ್ಳಲು ಹಮ್ಮೆ ಪಡುತ್ತೇನೆ. ರಂಗನಾಥ ನೀನಾಸಂ ಇವರು ಆಗಗ(ಬೇಕಾದ ಸಯಮದಲಿ) ಸಲಹೆ ಸೂಚನೆ ಕೊಟ್ಟು ನನ್ನ ಬರವಣಿಗೆಯನ್ನು ಪ್ರೋತ್ಸಾಹಿಸಿದವರು.

ಇಂದು ನಾನು ಈ ಹಂತದಲ್ಲಿ ಇರಲು ಕಾರಣರಾದ ನನ್ನ ಮಾವ ಅತ್ತೆ ಚಿಕ್ಕಪ್ಪ ಚಿಕ್ಕಮ್ಮ ಎಲ್ಲರಿಗೂ ಧನ್ಯವಾದಗಳು.ನನ್ನ ಒಡನಾಡಿ ಬಂದು ಸ್ನೇಹಿತ ತಬಲ ವಾದಕರು ಆದಂತಹ ಸದಾಕಾಲ ನನ್ನಜೊತೆ ಇದ್ದು ನನ್ನ ಪ್ರೋತ್ಸಾಹಿಸಿ ನನ್ನ ಆತ್ಮೀಯ ಶ್ರೀಶ ಅವರನ್ನು ನೆನೆಪಿಸಿಕೊಳ್ಳುವೆ. ನಿಧಿ ಹೆಗಡೆ ಅವರ ಪ್ರೊತ್ಸಾಹ ಕೊಟ್ಟಿದಕ್ಕೆ ಧನ್ಯವಾದ..

ನನ್ನ ಬದುಕಿನ ವಿವಿಧ ಹಂತದಲ್ಲಿ ನನ್ನ ಜೊತೆಗಿದ ನೂರಾರು ಗೆಳೆಯರ ಹೆಸರನ್ನು ಇಲ್ಲಿ ಹೇಳಲಾಗದಿದ್ದರು ಅವರೆಲ್ಲರ ಮನಃತುಂಬಿ ಸ್ಮರಿಸುವೆ. ಇವರೆಲ್ಲರಿಗೂ ಧನ್ಯವಾದಗಳು. ಇನ್ನೂ ಹಲವು ಕಾಣದ ಕೈಗಳು ನನ್ನ ಈ ಒಂದು ಕಾರ್ಯಕ್ಕೆ ಕಾರಣ ಕರ್ತರಾದ ಎಲ್ಲರನ್ನು ನೆನೆಪಿಸಿಕೊಳ್ಳುತ್ತ ಧನ್ಯವಾದಗಳನ್ನು ಹೇಳುತ್ತೇನೆ.

ಒಂದು ವರ್ಷದ ಶ್ರಮ. ತೊದಲು ನುಡಿಯಿಂದ ಶುರುವಾದ ಪಯಣ ಇಂದು ಅಂಬೆಗಾಲು ಇಡಲು ಪ್ರಾರಂಭಿಸಿದೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಈಗಷ್ಟೇ ಪ್ರವೇಶಿಸುತ್ತಿರುವೆ. ಕವಿತೆಗಳ ಗುಚ್ಛವನ್ನು ಓದಲು ಪುಸ್ತಕ ತೆರೆಯುತ್ತಿರುವಿರಿ ನಿಮಗೆ ಅಭಿನಂದನೆಗಳು.

**ಶಶಾಂಕ.ಎಮ್.ಜಿ**

# ಪರಿವಿಡಿ

# ೧. ಹೆತ್ತಮ್ಮ

ಹೆತ್ತ ಮಗುವನು ಕೈಯಲೆತ್ತಿ
ಮುದ್ದಾಡಿದ ತಾಯಿಗೆ ನಮೊ ನಮೋ

ಹೆತ್ತ ಮಗುವನು ತೊಟ್ಟಲಿಗೆ ಹಾಕಿ
ತನ್ನ ಕೈಯಾರೆ ತೊಟ್ಟಿಲು ತೂಗಿದ ತಾಯಿಗೆ ನಮೊ
ನಮೋ

ಹೆತ್ತ ಮಗುವು ಹಸಿವೆಂದು ಚೀರಿದಾಗ
ಎದೆ ಹಾಲ ಉಣಿಸಿ ಬೆಳೆಸಿದ ತಾಯಿಗೆ ನಮೊ ನಮೋ

ತನ್ನ ಕಂದಮ್ಮನಿಗೆ ತರ–ತರ ಉಡುಗೆ ತೊಡಿಸಿ
ಅದರಲ್ಲೆ ತನ್ನ ಸಂತಸ ಕಂಡ ತಾಯಿಗೆ ನಮೊ ನಮೋ

ಜಗಲಿಲಿ ನಿನ್ನೊಡನೆ ಆಡಿದ ಆಟ ನೀ ಮಾಡಿದ ಮೊದಲ
ಪಾಠಕ್ಕೆ ನಮೊ ನಮೋ

************************************

## ೨. ಗೃಹ

ಮನೆಯಲಿ ಮಾತೃವಿರಲು
ಮನೆಯಲಿ ಆಟಿಕೆಗಳೇಕೆ?
ಮನೆಯಲಿ ಅಜ್ಜ ಅಜ್ಜಿಯಿರಲು
ಮನೆಯಲಿ ಒಡಹುಟ್ಟಿದವರು

ಗೃಹದಿ ತಂದೆಯಿರಲು
ಕಷ್ಟದ ಮಾತೆಲ್ಲಿ?
ನಮ್ಮೆಲ್ಲರ ಕಷ್ಟಕ್ಕೆ
ಸಾಂತ್ವನ ಹೇಳುವ ಬುಜವಿರಲು

ಮನೆಯಲ್ಲಿ ಆಟಿಕೆಗಳೇಕೆ?
ಗೃಹದಿ ತಂದೆಯ ಬೆನ್ನಿರಲು
ತನ್ನ ಬೆನ್ನನ್ನು ಬಳಸಿ
ಉಪ್ಪು ಮೂಟೆ ಮಾಡಲು

ಮನೆಯಲ್ಲಿ ಅಜ್ಜ-ಅಜ್ಜಿಯಿರಲು
ಬೇರೆಯವರ ರಕ್ಷೆ ಏತಕೆ?
ಅವರ ಶ್ರೀರಕ್ಷೆಯು ಸದಾ ನಮ್ಮೆಲ್ಲರ
ಮೇಲೆ ಇರಲು ಅದುವೇ ದೊಡ್ಡ ರಕ್ಷೆ

ಮನೆಯಲ್ಲಿ ಒಡಹುಟ್ಟಿದವರು ಇರಲು
ನೆರೆಮನೆಯವರ ಮಕ್ಕಳು ಏತಕೆ?
ನಮ್ಮ ಮನೆಯೇ ಆಟದಮೈದಾನ
ಒಡಹುಟ್ಟಿದವರೇ ಸಹ ಕ್ರೀಡಾಪಟುಗಳು

ಮನೆಯಲ್ಲಿ ಒಡಹುಟ್ಟಿದವರು ಜೊತೆಗಿರಲು
ಮನೆಯು ಕೂಡುಕುಟುಂಬವಾಗಲು
ಒಂಟಿತನಕೆ ಸ್ಥಳವೆಲ್ಲಿ? ಒಂಟಿತನದ ಮಾತೆಲ್ಲಿ?
ನಾವೆಲ್ಲರೂ ಬಾಳೋಣ ಹೀಗೆ ಎಂದೆಂದಿಗೂ
ಜಂಟಿಯಾಗಿ.....

************************************

## ೩. ಮಳೆಗಾಲದ ಮನೆಯ ಅತಿಥಿ

ನೀನು ಈ ಗೃಹದ ಅತಿಥಿ
ನೀ ಬಂದೆ ಬರುವೆ ಪ್ರತಿವರ್ಷವೂ ಮರೆಯದೆ
ನೀ ಬರುವೆ ಅತಿಥಿಯಾಗಿ ಗೃಹದ ಒಳಗೆ
ಮದುವೆಯಾದ ಹೆಣ್ಣು ಸೇರು ಒದೆಯಲು ಬಲಗಳ
ಬಳಸಿದ ಹಾಗೆ

ನೀ ನಮ್ಮೆಲ್ಲರ ಹೆಮ್ಮೆಯ ಸದಸ್ಯೆಯಾಗುವೆ
ನೀ ನಮ್ಮೆಲ್ಲರ ಕಾಪಾಡಲು ಹವಣಿಸುವೆ
ನೀ ನಮ್ಮೆಲ್ಲರ ರಕ್ಷಿಸಲು ಕಾತರದಿ ಕಾಯುವೆ
ನಮ್ಮ ಮನೆಯ ನೆಚ್ಚಿನ ಸೊಸೆಯ ರೀತಿಯಲಿ

ಕೊನೆಯಲ್ಲಿ ನೀ ಆಗುವೆ
ಮನೆಯ ಒಂದು ಬದಿಯ ಮೂಲೆ ಗುಂಪು
ಮತ್ತೆ ನೀ ನೆನೆಪಿಗೆ ಬರವುದು ಅವಶ್ಯಕತೆ ಇರಲು

************************************

# ೪. ಹೆತ್ತಮ್ಮ

ಶರಣೆಂಬೆ ತಾಯಿ ಶರಣೆಂಬೆ
ನನ್ನ ಹೆತ್ತಮ್ಮಗೆ ನಮೋ ಎಂಬೆ
ನವಮಾಸದಿ ತಾ ನೊವುಂಡು
ಸತ್ತು ಬದುಕಿದ ಹೆತ್ತಮ್ಮಗೆ ನಾ ಶರಣೆಂಬೆ
ನವಮಾಸದಿ ಒಡಲೆಂಬ ಕಡಲೊಳಗೆ
ನನ್ನ ಬಚ್ಚಿಟ್ಟು ಸಂರಕ್ಷಿಸಿ ಹೊತ್ತ
ನನ್ನ ಈ ಜಗಕೆ ಪರಿಚಯಿಸಿದ
ನನ್ನ ಹೆತ್ತಮ್ಮಗೆ ಶರಣೆಂಬೆ
ತಾಯಿ ನಮೋ ಎಂಬೆ

ಬಾಲ್ಯದಿ ನನ್ನ ಮುದ್ದಿಸಿ
ಹಾಲುಣ್ಣಿಸಿ ಸಲಹಿದ
ನನ್ನ ಹೆತ್ತಮ್ಮಗೆ ನಮೋ ಎಂಬೆ

ನನ್ನ ತಪ್ಪಿಗೆ ಪ್ರೀತಿಯಿಂದ ಶಿಕ್ಷಿಸಿ
ನನ್ನ ಆಕ್ರಂದನಕೆ ಸ್ಪಂದಿಸಿ
ಅಕರೆಯಿಂದ ಸಂತೈಸಿ
ಅಕ್ಷರಗಳ ತಿದ್ದಿಸಿ
ಕಷ್ಟಗಳಿಗೆ ಸಂದಿಸಿದ
ನನ್ನ ಹೆತ್ತಮ್ಮಗೆ ಶರಣೆಂಬೆ

ಬಿರುಬಿಸಿಲಿಗೆ ತನ್ನ ಕಂದಮ್ಮ ಮೈ ಒಡ್ಡದೆ
ಕೊರೆಯುವ ಚಳಿಗೆ ತನ್ನ ಕಂದಮ್ಮ ಮೈ ಒಡ್ಡದೆ
ಸುರಿಯುವ ವರ್ಷದಾರೆಗೆ ತನ್ನ ಕಂದಮ್ಮ ಮೈ ಒಡ್ಡದೆ
ತನ್ನ ಕಂದಮ್ಮನ ಕಾಪಾಡಿದ ಹೆತ್ತಮ್ಮಗೆ ಶರಣೆಂಬೆ....

## ೫. ಕರದಿ–ಬಿಂದಿಗೆ

ಕುವರಿ ನೀ ಹೋಗಿ
ಜಲಧಾರೆಯ ಬಳಿ
ನಿನ್ನ ಬಿಂದಿಗೆಯ ತುಂಬಿಸಿ

ಆ ತುಂಬಿದ ಕೊಡವ
ನಿನ್ನ ಸೊಂಟದಿ ಇಟ್ಟು
ಮನೆಯ ದಾರಿ ಹಿಡಿಯೆ

ಮನೆಯ ದಾರಿ ಸವೆಸಲು
ನಡು ಮಧ್ಯದಿ ಕಲ್ಪನಾ
ಲೋಕದಿ ಮಗ್ನನಾಗಲು

ಆ ಕಲ್ಪನಾ ಲೋಕದಿ
ಕುವರಿಯಿಂದ ಚಿ!!ಕೌಂ!!ಸೌ ಆಗಲು
ಮನೆಯಾಂಗಲದಿ ತಾ ತಂದ
ತುಂಬಿದ ಬಿಂದಿಗೆಯ ನೀರನು
ತನ್ನ ಕರದಿ ಹೊಸ್ತಿಲ ಮೇಲೆ
ದಾರೆಯರೆದ ರೀತಿ ಹಾಕೆ
ಅದರ ಮೇಲೆ ತನ್ನ ಕೈಯಾರೆ
ರಂಗೋಲಿಯಲ್ಲಿ ಚಿತ್ತಾರ ಬಿಡಿಸೆ
ಮನೆಯ ಒಡತಿ ಅರ್ಥಾತ್ ತನ್ನ
ಅತ್ತೆಯ ಬಳಿ ತಾ ಸೈ ಅನಿಸಿಕೊಂಡಳು.

ಇನ್ನು ಉಳಿದ ಕೊಡದ ನೀರಿನು
ಕರದ ಸ್ಪರ್ಶದಿ ನೀರಿನ ಹನಿಯ ಗಿಡಕ್ಕೆ ಚುಂಬಿಸೆ

ಆ ಗಿಡದಿ ಮೊಗ್ಗು ಹುಟ್ಟಿ ಹೂ ಅರಳಿ
ಆ ಹೂ ಘಮಘಮ ಪರಿಮಳ
ಮನೆಯ ತುಂಬೆಲ್ಲ ಬೀರಲು
ಆ ಘಮಘಮ ಪರಿಮಳಸೂಸೊ ಹೂವನು
ತನ್ನ ಸ್ವ ಹಸ್ತದಿ ತನ್ನ ನೀಲ ಕೇಶದಿ ಮುಡಿದು
ತನ್ನ ತಾಯಿಯಂತೆ ಕಾಣುವ ತನ್ನ ಅತ್ತೆಗೆ
ದರ್ಶನ ಕೊಡಲು ಆ ಕ್ಷಣದಿ ಆತ್ತೆ ಆಶ್ಚರ್ಯ ಚಕಿತಳಾಗಿ
ತನ್ನ ಅಕ್ಷಿಯನ್ನೆ ನಂಬಲಾಗದೆ
ಈ ಘಟನೆ ಸತ್ಯವ್ಯಂಬದ ಕಾತ್ರಿ ಪಡಿಸೆ
ತನ್ನ ಸೊಸೆಯ ಹೊರ ಸ್ವರೂಪ ಕಂಡು
ತಾನೆ ಮೆಚ್ಚಿ ಕೊಂಡಾಡಿದಳು
ಈ ಕಡೆ ಮನೆಯ ಒಡತಿ ಅರ್ಥಾತ್ ತನ್ನ
ಅತ್ತೆಯ ಬಳಿ ತಾ ಸೈ ಅನಿಸಿಕೊಂಡಳು.

ಇನ್ನಳಿದ ನೀರನು ಒಂದು ಪಾತ್ರೆಗೆ ಹಾಕಿ
ಮನೆಯ ಮೇಲ್ಛಾವಣಿಯಲ್ಲಿ ಇರಿಸಲು
ಆ ನೀರ ಹಕ್ಕಿ-ಪಕ್ಷಿಗಳು ಕಂಡು
ತಮ್ಮ ಬಳಗದವರ ಕರೆದು
ತಮ್ಮ ತಮ್ಮ ಧಣಿವಾರಿಸಲು
ಸಹಾಯ ಮಾಡಿ ತಮ್ಮ ಸುಂಕುಲದ
ಆನಂದವ ತನ್ನ ಅಕ್ಷಿಯೊಳಗೆ ಕಂಡು
ಆ ಆನಂದವ ಅನುಭವಿಸುವ ಸುಯೋಗ
ತನ್ನದಾಗಿಸಿದ ಮನವ ಸಂಕುಲದ ಆ ಮಾತೆಗೆ
ಮನಃತುಂಬಿ ಹರಸಿದವು..
ಈ ಘಟನೆಯ ತನ್ನ ಕಣ್ಣಾರೆ ವೀಕ್ಷಿಸಲು
ತನ್ನ ಸೊಸೆಯ ತಾನು ಮನಃತುಂಬ ಹರಸಿದಳು
ಈ ಕಡೆ ಮನೆಯ ಒಡತಿ ಅರ್ಥಾತ್ ತನ್ನ
ಅತ್ತೆಯ ಬಳಿ ತಾ ಸೈ ಅನಿಸಿಕೊಂಡಳು....

ಆ ಕಡೆಯಿಂದ ಅವಳ ಸಖಿ ಬರಲು
ತನ್ನ ಜೀವಗೆಳತಿ ಮೈ ಮರೆತು ನಿಂತಿರುವುದ
ಕಂಡು ಹತ್ತಿರ ಹೋಗಿ ಕರೆಯಲು
ಆಗ ಆ ಜೀವಗೆಳತಿ ಕಲ್ಪನಾ ಲೋಕದಿಂದ
ವಾಸ್ತವಕ್ಕೆ ಬರಲು. ತಾ ಇದ್ದ ಲೋಕವ
ನೆನೆದು ತನ್ನ ಗೆಳತಿಯ ಮೊರೆ ನೋಡಿ
ತನ್ನಷ್ಟಕ್ಕೆ ತಾನೇ ನಕ್ಕಳು....

************************************

## ೬. ಅಡಿಕೆ

ಮದುಮಗಳ ರೀತಿ ಉಡುಪು ದರಿಸಿ
ನಿಮ್ಮ ಮನೆ ಸೊಸೆಯಾಗಿ ಬರಲು ಸಿದ್ದ
ನಿಮ್ಮ ಬರಮಾಡಿಕೊಳ್ಳುವ ಪರಿಯ ಬಗ್ಗೆ
ಆಲೋಚನೆಯಲ್ಲಿ ಮಗ್ನವಾಗಿರುವ ಅಡಿಕೆಯ ಹೊಸ
ಉತ್ಪನ್ನ

ಇದರ ಆವಿಷ್ಕಾರಗೊಳಿಸಿದ ವಕ್ತಿ ತಂದೆಯ ಸ್ಥಾನದಲ್ಲಿದು
ಅವಳನ್ನು ಸದ್ಗುಣಗಳಿಂದ ಸಲಹಿ ಪೋಷಿಸಿ
ಈ ಜಗವೇ ಅವಳಿಗೆ ತಾನು ಬದುಕಿ ಬಾಳಬೇಕಾದ ಮನೆ
ಎಂಬದ ಅರಿವು ಮಾಡಿ
ಅವಳ ಆ ಪಾತ್ರದ ಗುಣಗಳನ್ನು ಅಳವಡಿಸಿಕೊಳ್ಳಲು
ಅಣಿ ಮಾಡುತ್ತಿದ್ದಾನೆ..
ಆ ಗುಣಗಳಲ್ಲಿ ನಿಪುಣ್ಣತೆ ಹೊಂದಲು ತವಕದಿ
ಕಾಯುತ್ತಿರುವ ಇಂತಿ ನಿಮ್ಮ ಅಡಿಕೆ ಹೊಸ ಉತ್ಪನ್ನ

ನಾ ಬೆಳಸಿಹೆ ಸದ್ಗುಣಗಳ ಪರಿಚಯಿಸಿ
ನಾ ಕೊಡುವೆ ಬರವಸೆ ಅವಳೆಂದು ಆಗುವುದಿಲ್ಲ
ನಿಮ್ಮ ಮನೆ ಮನಸ್ಸುಗಳಿಗೆ ಮಾರಿ–ಹ್ಮೆಮಾರಿ
ನಾ ಒಪ್ಪಿಸುತ್ತಿರುವೆ ಇವಳನ್ನು ನಿಮಗೆ

ನಿಮ್ಮ ಮನೆ ಮಗಳೆಂದು ಭಾವಿಸಿ
ಹೊರಗಡೆಯವಳೆಂದು ಭಾವಿಸದಿರಿ
ನಾ ಕಾಣುವೆ ನಿಮ್ಮಲ್ಲರ ನಮ್ಮವರೆಂದು
ನಾ ಬೀರೆನು ಎಂದಿಗೂ ಅಡ್ಡ ಪರಿಣಾಮವ

ಮಾಡದಿರಿ ತಾತ್ಸಾರ
ಕಾಣದಿರಿ ತಾತ್ಸಾರ
ಮಾಡಿರಿ ನಿಮ್ಮ ಕೈಲಾದ ಪ್ರೋತ್ಸಾಹ
ಇದು ಆಗಲಿ ಶ್ರೇಷ್ಠ ಅಡಿಕೆ ಉತ್ಪನ್ನ
ನಾವೆಲ್ಲರೂ ಸೇರಿ ಬೆಳೆಸೋಣ
ಇಂತಹ ಉತ್ಪನ್ನ ಆವಿಷ್ಕಾರ ಮಾಡಿದ
ಹರಿಕಾರನನ್ನ..

************************************

## ೭. ಓ ನನ್ನ ಕಂದ

ಓ ನಾ ಹೆತ್ತ ಕಂದ
ನಾ ಕಲ್ಲುಬಂಡೆಯಲ್ಲ
ನನ್ನ ದೇಹ ಬರಿ ಚರ್ಮ ಬರಿತವಲ್ಲ
ನನ್ನ ಮನಸ್ಸು ಕ್ರೂರ ಕಟೋರವಾದದಲ್ಲ
ನಾ ಯಂತ್ರವಲ್ಲ ಯಾಂತ್ರಿಕದಿಂದಿರಲು

ನಾ ಮಾತೃ ಸ್ವರೂಪಿ
ನನ್ನ ದೇಹ ಮಮತೆಯ ಪ್ರತಿಬಿಂಬ
ನನ್ನ ಮನಸ್ಸು ಮೃದು ನೋಯಿಸದಿರು
ನೀ ಬಳಸದಿರು ನನ್ನ ನಿನಗೆ ಬೇಕಾದ ರೀತಿ

ನೀ ಕಂದಮ್ಮನಿರಲು ಹಸಿವು ಎಂದಾಗ
ಈ ನನ್ನ ಎದೆಯಿಂದ ಬಂದ ಹಾಲು ನಿನ್ನ ಹಸಿವು
ನೀಗಿಸಿತು
ನೀ ನೋಡ ಬೇಡ ಅದರ ಬೇರೆ ರೀತಿಯ
ನೀ ಬೆಳದು ನಿಂತಾಗ

ನೀ ಕಾಣು ಹೆಣ್ಣನ್ನು ಪೂಜ್ಯನಿಯ ಭಾವದಿ
ನೀ ಆಸೆಪಡಿದರು ನೀ ಬಂದ ಜಾಗಕ್ಕೆ
ನೀ ಅನುಭವಿಸಲು ನಾ ವಸ್ತುವಲ್ಲ
ನಿನ್ನ ದಾಹ ತಿರಿಸಲು ನಾ ನೀರಲ್ಲ ಅಥವಾ
ಅದರ ಪರ್ಯಾಯ ಪಾನೀಯನೂ ಅಲ್ಲ

ನಿನ್ನ ದೃಷ್ಟಿಯಲ್ಲಿ ನಾ ಬೇರೆ ರೀತಿಯಲ್ಲಿ
ಕಂಡರೆ ಅದು ನನ್ನ ದೋಷವಲ್ಲ

ಅದು ನಿನ್ನ ದೃಷ್ಟಿ ದೋಷ.
ಆಗು ಎಂದಿಗು ಒಳ್ಳೆಯ ಪ್ರಜೆ

ನೀ ಬೇಟೆಯಾಡಲು
ನಾ ಪ್ರಾಣಿಯಲ್ಲ
ನನ್ನ ದೇಹದಲ್ಲಿ
ಮಂಸವಿದ್ದರು
ತಿನ್ನಲು ಬಾರದು

ಅದರಿಸದಿರು ಹೆಣ್ಣನ್ನು
ಗದರಿಸದಿರು ಹೆಣ್ಣನ್ನು
ಆಲಂಗಿಸದಿರು ಹೆಣ್ಣನ್ನು
ಅವಮಾನಿಸದಿರು ಹೆಣ್ಣನ್ನು

ಆದರಿಸು ಹೆಣ್ಣನ್ನು
ಗೌರವಿಸು ಹೆಣ್ಣನ್ನು
ಪೂಜಿಸು ಹೆಣ್ಣನ್ನು
ಆಗ ಸಕಲವು ನಿನ್ನದೆ

ನಾ ಹುಟ್ಟಿದ ಮನೆಗೆ ಬೆಳಕಾಗಿ
ತಂದೆಗೆ ಮಗಳಾಗಿ
ಕೊಟ್ಟ ಮನೆಗೆ ನಂದಾದೀಪವಾಗಿ
ಸೊಸೆಯ ಪಟ್ಟ ತನ್ನ ತೆಕ್ಕೆಗೆ ಹಾಕಿಕೊಂಡು
ಗಂಡನಿಗೆ ಮಡದಿಯಾಗಿ
ಮಗುವಿಗೆ ತಾಯಿಯಾಗಿ
ಎಲ್ಲ ಜವಾಬ್ದಾರಿ ಜವಾಬ್ದಾರಿಯಾಗಿ ನಿಭಾಯಿಸಿ
ಮನೆಯ ಎಲ್ಲರ ನೆಚ್ಚಿನ ನೆಚ್ಚಿನಾತೆ
ಇರಲಿ ಅವಳ ಮೇಲೆ ಗೌರವ

## ೮. ಸಣ್ಣ ಕಳಕಳಿಯ ಕೋರಿಕೆ

ನೀ ಪೂರ್ಣವಿರಾಮ ವಾಗದಿರು ನನ್ನ ಬಾಳಲಿ
ನೀ ನನಗೆ ನೀಡು ಅಲ್ಪಾವಧಿಯ ನಾ ಹಾಕಿಸುವೆ
ನಮ್ಮನೆಯವರ ಹಸ್ತಾಕ್ಷರವ ನಮ್ಮ
ಈ ಪವಿತ್ರವಾದ ಸ್ನೇಹವ ಮುಂದಿನ ಹಂತದ
ಮುನ್ನುಡಿಗೆ...

ಮುನ್ನುಡಿಗು ಮುಂಚೆ ನೀ ನೀಡು ನನಗೆ
ಅಭಯಹಸ್ತವ ನೀ ಎಂದಿಗೂ ಆಗರಿವೆ
ನೀ ಬರುವ ಮನೆಗೆ ಸದಾ ನಂದಾದೀಪ
ನೀ ಆಗುವೆ ಮನೆಯವಲ್ಲರ ಕಣ್ಮಣಿ

ಮಾಡದಿರು ಭೇದಭಾವವ
ಮಾಡದಿರು ಮನೆಯ ಎರಡು ಭಾಗವ
ಕಾಣು ನೀ ನನ್ನ ಸೋದರಿಯ ನಿನ್ನ ಸೋದರಿಯ ಹಾಗೆ
ಸೊಂಕಿಸಿಕೊಳ್ಳದಿರು ನೆರೆಮನೆಯವರ ಕೆಡಕು ಮಾತುಗಳ

ಮನೆಯವರ ಹಸ್ತಾಕ್ಷರ ಬಿದ್ದಕೂಡಲೆ
ನಾವು ಆಗುವ ನವ ದಂಪತಿ
ನವ ದಂಪತಿ ಆದ ನವ ಮಾಸದಿ
ನೀ ನೀಡು ಒಂದು ವಂಶದ ಕುಡಿಯ

ನೀ ಕಾಣು ನಿಮ್ಮ ಅಪ್ಪ ಅಮ್ಮನ ರೂಪವ
ನಿನ್ನ ಅತ್ತೆ–ಮಾವನಲಿ
ನೀ ಎಬ್ಬಿಸದಿರು ದ್ವೇಷವೆಂಬ ಅಲೆಯ
ಈ ಮನೆ ಎಂಬ ಸಮುದ್ರದಿ

ನೀ ಬಿತ್ತದಿರು ವಿಷವೆಂಬ ಬೀಜವ
ನೀ ಬದುಕಿಬಾಳಬೇಕಾದ ಭೂಮಿಯಲಿ
ನೀ ಕಟ್ಟದಿರು ಮನೆಯವರ
ಮನಸ್ಸುಗಳ ಮಧ್ಯೆ ಗೋಡೆ

ನೀನಾಗು ನನಗೆ ಸ್ನೇಹದ ಮಡದಿ
ನೀನಾಗು ಮನೆಯವರು ಮೆಚ್ಚುವ ಸೊಸೆ
ನೀನಾಗು ನನ್ನ ಕಂದನಿಗೆ ಪ್ರೀತಿಯೆರೆಯುವ ಅಮ್ಮ
ನೀನಾಗು ಇದ್ದ ಮನಗೆ ಹಾಗು ಬಂದಮನೆಗೆ ಬೆಳಕು

************************************

# ೯. ಕುವರಿ ನೀ ಬಳಸು ನಿನ್ನ ಕರವ

ಕುವರಿ ನಿನ್ನ ಕರದಿ ಬಿಂದಿಗೆಯ ನೀರಿನಿಂದ ತುಂಬಿಸಿ
ನಿನ್ನ ಕರದ ಸ್ಪರ್ಶದಿ ತುಂಬಿದ ಕೊಡದ ನೀರಿನ ಹನಿಯ
ಗಿಡಕ್ಕೆ ಚುಂಬಿಸೆ
ಆ ಗಿಡದಿ ವೊಗ್ ಹೂವಾಗಿ ಅರಳಿ ಆ ಹೂ ಘಮಘಮ
ಪರಿಮಳ ಬೀರಲು ಮಾನವ ಸಂಕುಲದ ಅಕ್ಷಿಯೊಳು ಆ
ಆನಂದವ ಅನುಭವಿಸುವ ಸುಯೋಗ
ಆ ಸುಯೋಗ ಅನುಭವಿಸಿ ಹರಸಿಹ ನಿನ್ನ ಮನಃತುಂಬಿ

ಗಿಡವು ಮಾರವಾಗಿ ಬೆಳೆಯಲು ನೀ ಸಹಕಾರಿ
ಈ ನಿನ್ನ ಕಾರ್ಯ ಇಂದಿನವರು ಗಮನಿಸದಿರೆ
ಮುಂದಿನ ಪೀಳಿಗೆಯು ನಿನ್ನ ನೆನೆವರು..
ನೀ ಮಾಡಿದ ಕಾರ್ಯ ಫಲವು ಇಂದೇ ಸಿಗುವುದಿಲ್ಲ. ನೀ
ನಿನ್ನ ಕಾರ್ಯದಿ ಮಗ್ನನಾಗಿರೆ
ನಿನಗೆ ಗೊತ್ತಿಲ್ಲದೆ ಅದರ ಪ್ರತಿಫಲ ನಿನಗೆ ದೊರಕುವುದು.

ಆ ಭೂತಾಯಿ ನಿನ್ನ ಮನದಾಳದಿ ಹರಸುವಳು
ಪಕ್ಷಿಗಳು ನಿನ್ನ ಕಾರ್ಯವ ಮೆಚ್ಚಿ ಹರಸುವವು
ತನ್ನ ಕುಟುಂಬದ ಜೊತೆ ಕೂಡಿ ಸಂತಸದಿ ನಳಿದಾಡುವವು
ಪ್ರಾಣಿ ಮೃಗಗಳು ಕಾಡ ದಾರಿ ಬಿಟ್ಟು
ನಾಡ ದಾರಿಯ ಹಿಡಿಯಲಾರರು

ನೀ ಮಾಡುವ ಕಾರ್ಯದಿ ಪರಿಸರಕ್ಕೆ ಒಳಿತಾಗುವುದು
ತಾಪಮಾನದ ಸಮತೋಲನ ವಾಗುವ ಸಾಧ್ಯತೆ
ನಾ ಕೋರಿಕೊಳ್ಳುವೆ ನೀ ಆಗು ಯುವ ಪಳಿಗೆಗೆ ಮಾದರಿ
ನೀ ಬರಿ ಹೊಸ ಸಂಗತಿಗೆ ಮುನ್ನುಡಿ....

## ೧೦. ನನಗು ಒಂದು ಮನಸ್ಸುಂಟು

ನಾ ಹುಟ್ಟಿದ್ದು ಹೆಣ್ಣಾಗಿ
ಬೆಳದಿದ್ದು ಮನೆ ಮಗಳಾಗಿ
ಶಿಕ್ಷಣ ಪಡೆದ್ದಿದ್ದು ವಿದ್ಯಾರ್ಥಿನಿಯಾಗಿ
ಬೆಳೆದೆನು ನಿಮ್ಮೆಲ್ಲರ ಮಧ್ಯೆ
ನಿಮ್ಮ ಪ್ರೀತಿ ಅಕರೆ ಪಡೆಯುತ್ತ
ನಿಮ್ಮೆಲ್ಲರ ಹೆಮ್ಮೆಯ ನಾರಿಯಾಗಿ
ಆ ಕಾಲದಿ

ಇಂದು ನಾ ಕೇವಲ ಬೋಗಿಸುವ ವಸ್ತು
ಇಂದು ನಾ ಸುಖ ನೀಡುವ ವಸ್ತು
ನಿಮ್ಮ ಆಸೆ ಆಕಾಂಕ್ಷೆಗಳನ್ನು
ಪೂರೈಸುವ ವಸ್ತು ನಿಮ್ಮಗೆಲ್ಲ
ಈ ಕಾಲದಿ

ಈ ವೃತ್ತಿ ನನ್ನದಲ್ಲ
ಬೇಕೆಂದು ನಾನಾಗೆ ಅರಿಸಿದಲ್ಲ
ಒಂದು ಸನ್ನಿವೇಶ ನನ್ನ ಈ ಕೂಪಕ್ಕೆ
ಈ ಮಾರ್ಗದಿ ಚಲಿಸಲು ನಾಂದಿಯಾಯಿತು

ನಾ ವಸ್ತುವಾಗಿ ಮಾರ್ಪಟ್ಟಾಗಿಲ್ಲ
ನನಗು ಹೃದಯವಿದೆ
ನನಗು ಮನಸ್ಸಿದೆ
ಮನಸ್ಸಿನ ಜೊತೆ ಮನುಷ್ಯತ್ವವಿದೆ

ಬೆಳಗ್ಗಿನ ವೇಳೆ ನೀ ನನ್ನ ಸಹ ಕೆಲಸಗಾರ

ರಾತ್ರಿಗೆ ಅದೇ ದೇಹಕ್ಕೆ ಆಸೆ ಪಡುವೆ
ನಿನ್ನ ಪಲ್ಲಂಗದ ಅರಸಿಯಾಗಲು ಬಯಸುವೆ
ಈ ನಿನ್ನ ಕಾರ್ಯಕ್ಕೆ ನಾ ಏನ ಹೇಳಲಿ

ಹೆಚ್ಚು ಮಾತನಡಿದರೆ ಅಥವಾ ಪ್ರತಿರೋಧ
ಒಡ್ಡಿದರೆ ನೀ ನನ್ನ ಗದರಿಸುವೆ
ನನ್ನ ಮೇಲೆ ಹೂ ಮಳೆ ಸುರಿಸುವ ಹಾಗೆ
ಕಾಂಚಣದ ಮಳೆಯನ್ನೇ ಸುರಿಸುವೆ

ರಾತ್ರಿ ತೋರಿಸುವ ಪ್ರೀತಿ
ಬೆಳಗ್ಗೆ ನೀ ನನ್ನ ಮೋರೆ ನೋಡಿದರೆ
ವಿರಹ ವೇದನೆ ಕಾಣಿಸಲಿಲ್ಲ ನಿನ್ನ ಮೊಗದಿ
ಮಿಗಿಲಾಗಿ ನಿನ್ನ ಮೊಗದಲ್ಲಿ ಪ್ರಶ್ನೆಯ ಸುರಿಮಳೆಯೆ
ಎದ್ದು ತೋರುತ್ತಿತ್ತು ಅದರ ಜೊತೆಗೆ ಅಸಹ್ಯದ ಭಾವನೆ
ಮಿಲನವಾಗಿತ್ತು

ನನ್ನ ಹೆತ್ತವರಿಗೆ ನಾ ಹೇಗೆ ಮೋರೆ ತೋರಿಸಲಿ
ನನ್ನ ಈ ಪಾಪದ ಹಣದಿ ನಮ್ಮವರು ಜೀವನ
ಸಾಗಿಸುತ್ತಿಹರು
ಈ ವಿಷಯ ಅವರು ಅರಿತರೆ ಅರೆಕ್ಷಣದಿ
ಪ್ರಾಣತ್ಯಾಗವ ಮಾಡುವರು..

*************************************

## ೧೧. ನನ್ನ ಮನದಾಳದ ಮಾತು

ನೀನು ನನ್ನ ಬಾಳಿನಲ್ಲಿ ಶಾಶ್ವತ ಛಾಪು ಮೂಡಿಸಲು
ನಿನ್ನ ನಾ ಹೇಳುವ ಗುಣಗಳಿದ್ದರೆ ಸಾಕು
ನಾನೇ ಹಾಕಿಸುವೆ ರುಜುವಾತು
ನಮ್ಮ ಈ ಸ್ನೇಹದ ಬಂದಕ್ಕೆ

ಗುಣಗಳು ಇಲ್ಲದಿರಲು
ರೂಪಿಸಿಕೊಳ್ಳುವ ಇಚ್ಚೆ ಇದ್ದರೆ
ನಾ ಮುಂದುವರಿಯಲು ಬಯಸುವೆ

ಮನೆಗೆ ಬಂದ ಅತಿಥಿಯ
ನೀ ಎದರುಗೊಳ್ಳಬೇಡ
ನಿನ್ನ ಕಾಲಿ(ಬೋಳು) ಹಣೆಯಲಿ
ಬಳೆ ತೊಡದ ಕೈಯಲಿ
ಗೆಜ್ಜೆನಾದವಿಲ್ಲದ ಕಾಲಲಿ

ನೀ ತೊಡಬೇಕೆಂದಿಲ್ಲ ಆಡಂಬರದ
ಉಡುಗೆ ತೊಡುಗೆಯ ಧರಿಸು ನೀ
ಸುಸಂಸ್ಕೃತದ ತೊಡುಗೆಯ
ನಿನ್ನ ಗೌರವ ನಿನ್ನಲ್ಲಿಯೆ

ನೀ ಈ ಮನೆಯ ಸೊಸೆಯಾಗಿ
ಮನೆಯ ಗೌರವವನ್ನು ಎತ್ತಿ ಹಿಡಿಯುವಂತವಳಾಗು
ನೀ ಮಾಡದಿರು ಮನೆ ಹಿರಿಯರನ್ನು
ವೃದ್ಧಾಶ್ರಮದ ಕದವ ತಟ್ಟುವ ಹಾಗೆ

ನೀ ನೀಡು ಭರವಸೆಯ
ನೀ ಎಂದಿಗೂ ಕಾಪಡುವೆ
ನನ್ನ ಮನೆಯವರ ಎಂದೆಂದಿಗೂ
ನಿನ್ನ ಕಣ್ಣರೆಪ್ಪೆಯ ಹಾಗೆ

ನೀ ಕಲಿಯಬೇಕಾದದ್ದು ಬೇಕಾದಷ್ಟು ಇದೆ
ಅದನ್ನು ಹೇಳಿ ಕೊಡಲು ನಿನ್ನ ಅತ್ತೆ ಸದಾ ಸಿದ್ದ
ಮುಂಜಾನೆ ಬೇಗ ಎದ್ದು ಮನೆಯ ಮುಂದೆ
ರಂಗೋಲಿಯಲಿ ಸುಂದರ ಚಿತ್ತಾರ ಹಾಕಲು

ಬೆಳಗ್ಗಿನ ಪೂಜೆಗೆ ಅಣಿಮಾಡಲು
ನೀ ಸಿದ್ದವಿರಬೇಕು
ದೇವರ ನೈವೇದ್ಯದ ತಯಾರಿಯಲಿ
ನೀ ತೊಡಗಬೇಕು
ಸ್ವಾದಿಷ್ಟದ ಅಡುಗೆಯ ಜೊತೆ
ಅಮ್ಮನ ಕೈರುಚ್ಚಿಯನ್ನ
ನೀ ಅಲವಡಿಸಿಕೊಳ್ಳಬೇಕು
ಮನೆಗೆ ಬಂದ ಅತಿಥಿಯ ಸತ್ಕಾರ
ಮಾಡುವುದನ್ನು ನೀ ಕಲಿಯಬೇಕು

ಇದಿಷ್ಟು ನನ್ನ ನಯವಾದ ಕೋರಿಕೆ
ಇದಕ್ಕಾಗಿ ನೀ ಆಗಬೇಕು ಗರತಿ ಗೌರಮ್ಮ
ಎಂದು ನಾ ಹೇಳುವದಿಲ್ಲ

ನಿನ್ನ ಆಧುನಿಕತೆಯಲಿ
ನೀ ಕಳೆದುಕೊಳ್ಳಬೇಡ ನಿನ್ನ ತನವ
ನೀ ಅಳಿಯಬೇಡ ಹಿರಿಯರು
ಮಾಡಿಟ್ಟ ಸಂಸ್ಕೃತಿಯ ಹಾಗು ಸಂಪ್ರದಾಯವ.

## ೧೨. ಪ್ರಿಯತಮೆಯ ಅಳಲು

ನನ್ನ ದೇಹದ ಒಡೆಯ ನೀನು
ನಮ್ಮ ಈ ಪ್ರೇಮ ಸಲ್ಲಾಪದ
ಬೆಳಯುತ್ತಿಹುದು ನನ್ನ ಒಡಲಿನಲ್ಲಿ
ಕರುಳ ಬಳ್ಳಿಯೊಂದು

ನಾ ನಿನ್ನ ಹೃದಯ ಅರಸಿ
ನೀ ಯಾವ ಸಮಯದಿ ಬಡ್ತಿಯ ಕೊಡುವೆ
ನಿಮ್ಮನೆಯ ಅರಸಿಯ ಪದವಿಗೆ
ನಿರ್ಧರಿಸಲು ಇರುವ ಸಮಯ ಅಲ್ಪ

ಮಾಡದಿರು ಅಸಡ್ಡೆಯ
ತೋರದಿರು ಶ್ರೀಮಂತನದ ದರ್ಪವ
ಸಮಾಜ ಕೇಳುತ್ತಿಹುದು ಎನ್ನ
ನಾ ತೋರಬೆರಳಲಿ ತೋರ್ಪಡಿಸುವೆ ನಿನ್ನ

ನನ್ನ ಪ್ರಶ್ನೆಗೆ ನಿನ್ನ ಉತ್ತರ ಕೇಳಿ
ನಾ ನಿನ್ನ ಹೃದಯ ಅರಸಿಯೆ ಹೊರತು ಪಟ್ಟದರಸಿ ಅಲ್ಲ
ಅನ್ನುವುದ ಕೇಳಿ ಜ್ವಾಲಾಮುಖಿಯೇ ಸ್ಫೋಟವಾಯಿತು
ನನ್ನ ಹೃದಯಾಂಗಳದಿ

ನನ್ನ ದೇಹದ ಮೇಲೆ ಕಾಮ
ನೋಟವ ಬೀರಿದ ನಿನಗೆ ನನ್ನ ಧಿಕ್ಕಾರ
ನನ್ನ ದೇಹವಿರುವುದು ಕಾಮ ಕ್ರೀಡೆಗಲ್ಲ
ನನ್ನ ಅಂಗಾಂಗಗಳು ಅಷ್ಟೆ

ನನ್ನ ಮೊಲೆ ಕಾಮು ಬಂಡೆಯಲ್ಲ
ನನ್ನ ಕಂದಮ್ಮನಿಗೆ ಹಾಲುಣ್ಣಿಸಿ
ಹಸಿದ ಹೊಟ್ಟೆಯ ತುಂಬಿಸಲು
ಮತ್ತೆ ನನ್ನ ಕಂದನ ಕ್ಷಾಮದಿಂದ ಕಾಪಾಡಲು

ಓ ಇಂದಿನ ಯುವ ಜನಾಂಗವೆ
ನೀವು ಬೀಳದಿರಿ ಇಂತ ಮಾಂತ್ರಿಕರ
ಮಾಯಾ ಜಾಲಕ್ಕೆ ಬಿದ್ದು ಆಗದಿರಿ
ಅವರ ಕೈ ಗೊಂಬೆ

************************************

## ೧೩. <u>ಕೊಳ</u>

ಅಲ್ಲಿಯಿಹುದು ಕೊಳ
ಕೊಳದಲಿರುವುದು ನೀರು
ನಿನ್ನ ಕರಸ್ಪರ್ಶದಿ ತಿಳಿನೀರು
ಅಮೃತ ಬಿಂದುವೇ ಆಗಿಹುದು

ನಿನ್ನ ಕರದಿ ಸ್ಪರ್ಶಿಸಿದ ಜಲವು
ಎಂದಿಗೂ ತಳಕಾಣದಿರಲಿ
ರೈತರ ಜೀವನಕ್ಕೆ ಎಂದಿಗೂ ಅಮೃತ ಬಿಂದುವಾಗಿರಲಿ
ನೀನಾಗಿರು ಈ ಮಾರ್ಗದಿ ಹೆಳೆ(ನೆಪ) ಮಾತ್ರ

ಬೀಗದಿರು ಎಲ್ಲು ನಿನ್ನಿಂದನೆ ಎಲ್ಲಾ ಎಂದು
ನೀ ನೆಪ ಮಾತ್ರ ಈ ಸನ್ನಿವೇಶದ
ಕಾರಣಕರ್ತ ಕುಳಿತಿಹನು ಅಂಬರದಿ
ಕಣ್ಣಿಗೆ ಗೋಚರಿಸದೆ.....

*************************************

## ೧೪. <u>ಪ್ರೇಮ ಸಲ್ಲಾಪ</u>

ಇಣುಕಿ ನೋಡಿ ಮಾಡುವುದಾದರು ಏನು ನೀನು
ನಾ ನಿನ್ನ ಮುಂದೆ ಬಂದರೆ ಜಗಳವಾಡುವೆ ನೀ
ನಾ ಯಾರೆಂದು ಬಿಂಬಿಸುವೆ ನೀ
ಅಪರಿಚಿತ ನೋಟ ಬೀರವೆ ನೀ

ಮರದ ಮರೆಯಲಿ ನಿಂತು ಕದ್ದು ನೋಡವ
ನೋಟದ ಅನುಭವವ ಮಾಡಿಸಿದವಳುನೀ
ಮರದ ಮರೆಯಲಿ ನಿಂತು ನನ್ನ ಬರುವಿಕೆಗೆ
ಕಾದು ನಿಂತವಳು ನೀ

ನಾ ಹಾಗೆ ಹೋಗುವ ಅವಸರದಿ ಒಮ್ಮೆ
ಹಿಂದಿರುಗಿ ನೋಡಲು ನೀ ಮರೆಯಲಿ ನಿಂತು
ನನ್ನ ನಿರ್ಗಮನದ ಹಾದಿ ಕದ್ದು ನೋಡುತಿರುವುದ ನಾ
ಅರಿತೆ ಆ ಕ್ಷಣದಿ ನಿನ್ನ ಕಣ್ಣುಗಳೆ ಸಾರಿ ಸಾರಿ ಹೇಳಿದವು
ನಿನ್ನ ಮನದಾಳದ ಮಾತುಗಳ

ಆ ಮರದ ಬುಡದಲ್ಲಿ ಇರುವ ಗಿಡದ ಹಾಗೆ
ನೀ ತುಂಬು ಜೀವವ ನಮ್ಮಿಬ್ಬರ ಪ್ರೀತಿ ಗೆ
ಎಂದು ಹಸಿರಾಗಿರಲಿ ನಮ್ಮಿಬ್ಬರ ಪ್ರೀತಿ
ಎಂದೆಂದಿಗೂ ಸವೆಸೋಣ ನಮ್ಮಿಬ್ಬರ ಬಾಳ ಹಸನಾಗಿ
ಸದಾಕಾಲವೂ ಹಸನ್ಮುಖಿಗಳಾಗಿ....

************************************

## ೧೫. ಪುಟ್ಟ ಕಂದನ ಆಳಲು

ಪುಟ್ಟ ಮುದ್ದು ಕಂದನ ಮೊಗದಿ
ಕಣ್ಣೀರು ಒತ್ತಿ ಹೊರಬಂದಿಹುದು
ತನ್ನವರು ಯಾರೆಂದು ತಿಳಿಯದೆ
ಅನಾಥ ಮನೋಭಾವವ ಹೊತ್ತು

ಕಣ್ಣುಗಳೆರಡು ಹುಡುಕುತ್ತಿಹುದು
ಈ ಉದ್ದ ದೊಡ್ಡ ಮಾರ್ಗದಿ ನನ್ನವರ್ಯಾರೆಂದು
ಕಣ್ಣ ನೋಟವು ಬೀರಿದೆ
ತನ್ನ ದೃಷ್ಟಿಯ ಈ ಮಾರ್ಗದ ಕೊನೆತನಕ

ಹೊಟ್ಟೆ ಕಾಲಿಯಾಗಿದೆ
ತನ್ನ ಬಾಯಿ ಬೇಡಿದೆ
ನಾಸಿಕವು ವಾಯುವನ್ನು ತನ್ನದಾಗಿಸಿಕೊಂಡಿದೆ
ಉಸಿರಾಟವು ನಿಂತಂತಾಗಿದೆ

ನೀ ಎಲ್ಲಿರುವೆ ನಾ ಕಾಣೆ
ನನ್ನ ಮನ ನಿನ್ನ ಹಂಬಲಿಸಿದೆ
ಬಾ ಬೇಗ ನೀ ಎಲ್ಲಿರುವೆ
ವಾಯು ವೇಗದಿ ಬಂದು ಸೇರು ನನ್ನೆಯ...

************************************

## ೧೬. ಮುಪ್ಪು

ಮುಪ್ಪಿನ ವಯಸ್ಸಿನಲ್ಲಿ ಮಕ್ಕಳ ಮೊಮ್ಮಕ್ಕಳು ಜೊತೆ
ಆಡಿ ಹಾಡಿ ನಲಿದಾಡಿಕೊಂಡಿರಬೇಕಾದ ಜೀವ
ತನ್ನ ಜೀವನೋಪಾಯದ ಮಾರ್ಗವ
ಕಂಡುಹಿಡಿದುಕೊಳ್ಳುವ ಭರಾಟೆ

ತನ್ನ ಜೀವನಾವದಿಯನೆಲ್ಲ ತನ್ನ ಮಕ್ಕಳ ಲಾಲನೆ
ಪಲಾನೆಯಲ್ಲಿ ಕಳೆದು ತನ್ನ ಮಕ್ಕಳಿಗಾಗಿ ತನ್ನ
ಹೊಟ್ಟೆ ಬಟ್ಟೆಯ ಕಟ್ಟಿ ಜೀವನ ನೆಡೆಸಿ
ಮಕ್ಕಳ ವೃದ್ದಿಯ ಕಂಡು ಸಂತಸ ಪಟ್ಟ ಜೀವ

ಈಗ ಈ ಇಳಿವಯಸ್ಸಿನಲ್ಲಿ ತನ್ನ ಜೋಪಡಿಯ
ಹುಡುಕಾದಲ್ಲಿ ಪ್ರಪಂಚದ ಪರ್ಯಟನೆ ಮಾಡುತ್ತ
ಕಣ್ಣಲ್ಲಿ ಕಂಬನಿ ಸುರಿಸುತ್ತ
ಮನಸ್ಸಲ್ಲೆ ಮರುಗುತ್ತಿರುವ ಜೀವ

ಯಾರೊ ಹಾದಿ ಬೀದಿಯಲಿ ಹೋಗುವವರಲ್ಲಿ
ಒಬ್ಬರು ಕರುಣಾಮೂರ್ತಿ ಪುಣ್ಯಾತ್ಮರು
ತಂದು ಸೇರಿಸಿಹರು ಈ ವೃದ್ಧಾಶ್ರಮಕ್ಕೆ
ಅವರಿಗಿರುವ ಕರುಣೆ ನಿನಗಿಲ್ಲವಾಹಿತ್ತಲ್ಲ.

ಅವಳು ನಿನ್ನ ನವಮಾಸದಿ
ಹೆತ್ತು ಹೊತ್ತು ಸಾಕಿಹಲು ನೀನ್ನ
ಕಾಣಬೇಡ ನಿಕೃಷ್ಟದಿ ಅವಳನ್ನ
ಸಾಕಿ ಸಲಹು ಅವಳನ್ನ

************************************

# ೧೭. ಜೀವನ

ಜೀವನವೆಂಬುದು ಒಂದು ಗಾಡಿ
ಅದರಲ್ಲಿ ನಾ ಸಾರಥಿಯು
ಪ್ರಯಾಣಿಸವ ಹಂಬಲ ನಿನ್ನಲ್ಲಿದರೆ
ನೀ ಪ್ರಯಾಣಿಕನಾಗುವೆ

ಕೆಲವಮ್ಮೆ ಸಾರಥಿ ಮಾರ್ಗ ತಪ್ಪಿದರು
ಪ್ರಯಾಣಿನಾಗಿರುವ ನೀನಾಗಬೇಕು ಸಾರಥಿಯು
ಆಕೆಂದರೆ ನಾ ಒಬ್ಬ ಮೋಜಿನ ತಲೆತಿರುಕ
ನಾ ಆಸೆಬುರುಕನೂ
ಅದಕ್ಕೆ ನಿನ್ನ ಕಡಿವಾಣ ಅತ್ಯಗತ್ಯ

ಹಾಗೆಂದು ನೀ ಬಳಸದಿರು
ಸಿಕ್ಕ ಅವಕಾಶವ ನಿನ್ನ ಸ್ವಾರ್ಥ ಸಾಧನೆಗೆ
ಈ ಅವಕಾಶ ಬಳಸಿ ನೀ ತೋರಿಸು
ನೀ ಎಷ್ಟು ಸಮರ್ಥಳೆಂದು
ಈ ಮನೆಯ ಸೊಸೆಯ ಗದ್ದುಗೆಗೆ....

ಈ ಮನೆಯ ಕ್ಷೇಮವ ಕಾಪಾಡುವ ಹೊಣೆಗಾರಿಕೆ
ನಿನ್ನದು
ಈ ಮನೆಯ ಕ್ಷಾಮದಿಂದ ನಲುಗದಿರವಂತೆ
ನೋಡಿಕೊಳ್ಳುವ ಹೊಣೆಗಾರಿಕೆ ನಿನ್ನದು
ಮನೆಯವರು ತಿಳಿಯದೆ ತಪ್ಪು ಮಾಡಿದರೆ
ಕ್ಷಮಿಸುವುದು ನಿನ್ನ ಹೊಣೆಗಾರಿಕೆ
ಈ ಮನೆಗೆ ಕೆಡಕು ಬಯಸುವವರನ್ನು
ನೀ ಎಂದಿಗೂ ಕ್ಷಮಿಸದಿರು
ಈ ಎಲ್ಲ ಕ್ಷಮತೆಯನ್ನು ಹೊಂದಿದವಳು ನೀನು

# ೧೮. ಕೈಯಲ್ಲಿರುವ ವಿಶ್ವವ ಕಣ್ಣಿಗೆ ಕಟ್ಟುವ ಹಂಬಲ

ತನ್ನ ಬಾಳಲ್ಲಿ ತಾ ಕಾಣದ ವಿಶ್ವವ
ಕಂದನಿಗೆ ಚಿತ್ತಾರದ ಮೂಲಕ ತೋರ್ಪಡಿಸುವ ಹಂಬಲ
ತನ್ನ ತಾಯಿಯ ಆ ತೋರ್ಪಡಿಸುವಿಕೆಯ ಕಾತರ ತನ್ನ
ಕಣ್ಣಲ್ಲಿ ಸೆರೆಹಿಡಿದು
ತನ್ನ ತಾಯಿಯ ಆನಂದ ತಾ ಅನುಭವಿಸುತ್ತಿಹನು

ತಾಯಿಯ ಆ ಚಿತ್ತಾರ ಬಿಡಿಸುವಿಕೆಯ
ಸೌಮ್ಯದಿ ಕುಳಿತು ಹೊಸಹೊಸ ಬಣ್ಣವ ಕಾತರದಿ
ಕಣ್ತುಂನಿಕೊಳ್ಳುತ್ತಿಹನು
ಈ ಮೂಲಕವೇ ಅವನ ಬಾಲ್ಯದ ಶಿಕ್ಷಣದ ಆರಂಭ
ಮುಂದಿನ ಶಿಕ್ಷಣಕ್ಕೆ ಅದುವೇ ಬಂಡವಾಳವಾಗುವ ನಂಬಿಕೆ

ಅದನ್ನ ಮಾರಿದರೆ ಅವರ ಜೀವನ ಸಾಗುವುದು
ಅವರ ಮೂರು ಹೊತ್ತಿನ ಅನ್ನಕ್ಕೆ ಅದುವೇ ಮೂಲ
ಮುಂದೊಂದು ದಿನ ತನ್ನ ಮಗನು ಎಲ್ಲರಾಗೆ
ವಿಶ್ವ ಪರ್ಯಟನೆ ಮಾಡುವನು ಎಂಬ ಹಂಬಲ

************************************

## ೧೯. ಅಮ್ಮ ನನ್ನ ಮುದ್ದು ಅಮ್ಮ

ಕರದಿ ಮುದ್ದಿಸಿದಳು ತನ್ನಮ್ಮನ
ಕಳುತ್ತಿಹಿಳು ತನ್ನಮ್ಮನ ಕುಶಲೋಪರಿಯ
ಆ ಕ್ಷಣಕ್ಕೆ ತಾಯಿಯು ಆನಂದಚ್ಚರಿಯದಿ ದಿಟ್ಟಿಸಿ
ನೋಡುತ್ತಿಹಳು ತನ್ನ ಕಂದನ ಪ್ರಶ್ನಾರ್ಥಕ ಭಾವದಿ

ಅಮ್ಮ ನನ್ನ ಮುದ್ದು ಅಮ್ಮ ಎನ್ನುತ್ತ ಮುದ್ದಿಸಿ
ತನ್ನ ಬೇಡಿಕೆಯ ಮುಂದಿಟ್ಟು ಈಡೇರಿಸಿಕೊಳ್ಳುವ
ಹಂಬಲದಿ
ಇದ ಅರಿಯದೆ ತನ್ನ ಕಂದನ ಪ್ರೀತಿಯ ಮಾಡುವ
ಪರಿಯ ಕಂಡು ತನ್ನನ್ನು ತಾನು ಮಾರೆತಿಹಿಳು

ತನ್ನ ಕಂದನ್ನಲ್ಲೆ ತನ್ನ ಅಮ್ಮನ ಕಂಡ ಕಂದಮ್ಮನ ತಾಯಿ
ತನ್ನ ತಾಯಿಯು ತನ್ನ ಬಳಿ ಮೊರೆಟ್ಟಿರುವ ಪರಿಯ
ಕಂಡು
ಅದ ಈಡೇರಿಸುವ ಮಾರ್ಗವ ಹಿಡಿದಿಹಳು
ಇದ ಅರಿತ ಕಂದ ಸಂತಸಗೊಂಡಿಹಳು

************************************

# ೨೦. ಮನುಜನ ಸ್ಥಿತಿ

ಹುಟ್ಟನ್ನು ಬಡ ಕುಟುಂಬದಲ್ಲಿ ಕಂಡು
ಹೊಟ್ಟೆಗೆ ಬಟ್ಟೆಗೆ ಕಣ್ಣಿನ ಹನಿಯೆ ಉತ್ತರ
ಬೆಳೆಯುತ್ತ ಬೆಳೆಯುತ್ತ ಕಣ್ಣಿನ ಹನಿಯು ಪನ್ನೀರಾಯಿತು

ಮನೆಗೆ ಕಾಲಿಟ್ಟ ಗೃಹಿಣಿಯಿಂದ
ಮನೆಯಲ್ಲೆ ಲಕ್ಷ್ಮಿ ವಾಸವಾಗತೊಡಗಿದಳು
ಬಡ ಕುಟುಂಬದಲ್ಲಿ ಸಿರಿತನದ ಘಮ ಪಸರಿಸಲು
ಪ್ರಾರಂಭ
ಆ ಘಮ ಊರೆಲ್ಲ ಸೂಸಿತು

ಆ ಸಿರಿತನ ತನ್ನ ಚಾಪನ್ನು ಮೂಡಿಸವಲ್ಲಿ ಯಶಸ್ವಿ
ಆ ಚಾಪಿನಿಂದ ಆ ಕುಟುಂಬವು ತನ್ನನ್ನು ತಾನು
ವಿಸ್ತರಿಕೊಂಡಿದರ ಜೊತೆಗೆ ಜಗಕೆ ಸಹಾಯ ಹಸ್ತವಾಯಿತು
ಆಗ ಆ ಜಾಗ ಕಾಣದ ಕೈ ಸ್ವತ್ತಾಯಿತು

ಹಾಗೆ ಕಾಲ ಕಳೆದಂತೆ ಆ ಸಾಮ್ರಾಜ್ಯದ ವ್ಯಾಪ್ತಿ
ನಯನಕ್ಕೆ ನಿಲಕದ್ದು
ಆಗ ಆ ಒಡೆಯಿಗೆ ಸಾವಿರ ಜನರಕ್ಕೆ ಒಬ್ಬನ ಪಾಲಿಗೆ
ಬರುವ ದೇಹದ ಸ್ಥಿತಿಯಲ್ಲಿ ಏರು ಪೇರು

ಆ ದೇಹದ ಸ್ಥಿತಿಯ ಕಂಡು ಆಡಿಕೊಳ್ಳುವವರೆಷ್ಟೋ
ಕೊಂಡಾಡುವವರೆಷ್ಟೋ ಮನುಜ?
ಅದಕ್ಕೆ ಮಹಲ್ಗಿಂತ ಜೋಪಡಿಯೇ ಲೇಸು
ಮನಃಶಾಂತಿ ದೊರೆಯಲು......

*************************************

# ೨೧. ಬದುಕಿದ ಸ್ಥಳ

ನನ್ನ ಹೆತ್ತವರು ಬದುಕಿ ಬಾಳಿದ ಊರು
ನನಗೆ ಬದುಕಲು ಅವಾಕಾಶಮಾಡಿಕೊಟ್ಟ ಸ್ಥಳ
ನನ್ನ ಬಾಲ್ಯವ ನಿನಪಿಗೆ ಬಂದಾಕ್ಷಣ
ಆ ಕ್ಷಣಕ್ಕೆ ಕಣ್ಣಟ್ಟುವ ಮನೋಹರ ಚಿತ್ರಣ

ನಮ್ಮೂರ ನಾ ಹೇಗೆ ಬಣ್ಣಿಸಲಿ
ನಾ ಅರಿಯೆ

ನಾ ನೋಡಿದ ಊರಿನ ಪರಿಯೆ ಬದಲಾಗಿದೆ
ಖಾಲಿ ಜಾಗಗಳಲ್ಲಿ ಮಹಲುಗಳದೇ ದರ್ಬಾರು
ಅಂದಿನ ಆಟದ ಮೈದಾನಗಳು ಇಂದಿನ ವಾಣಿಜ್ಯ
ಮಳಿಗೆಗಳಾಗಿ ಮಾರ್ಪಾಟಾಗಿದೆ
ಆದರೆ ರಸ್ತೆಗಳು ಅಂದಿಗಿಂತ ಇಂದು ತನ್ನ ನೈಜ
ಸ್ವರೂಪವ ಕಳೆದುಕೊಂಡಿದೆ

ಈ ಬೆಳವಣಿಗೆಯನ್ನು ನಾ ಶ್ಲಾಘಿಸಲೋ ಬಿಡಲೋ
ಕಟ್ಟಡ ನಿರ್ಮಾಣವಾಯಿತ್ತೆಂದು ಹಸ್ನಮುಖಿಯಾಗಿ
ನನ್ನನ್ನು ನಾನು ಸಮಾಜದ ಎದುರು ತೋರ್ಪಡಿಸುತ್ತ
ಆಂತರಿಕ ಸಮಸ್ಯೆಯ ತನ್ನಲ್ಲೇ ಲೀನಮಾಡಿಕೊಳ್ಳಲೇ
ನಾ ಅರಿಯೆ...

**************************************

## ೨೨. ಅಸ್ತಿತ್ವದ ಹುಡುಕಾಟ

ಅವ್ವ-ಅಪ್ಪ ಕಾರಣದಿಂದ
ನನ್ನ ಜನನ ಅವರಿಂದ ನನ್ನ ಅಸ್ತಿತ್ವ

ಬಾಲ್ಯದಲ್ಲಿ ನನ್ನ ಮನೆತನದ
ಹೆಸರಿಂದ ನನ್ನ ಅಸ್ತಿತ್ವ

ಶಾಲೆಯಲ್ಲಿ ನಮ್ಮ ತಂದೆ ತಾಯಿಯ
ಹಸರಿಂದ ನನ್ನ ಅಸ್ತಿತ್ವ

ಯೌವ್ವನದಲ್ಲಿ ತಂದೆ ತಾಯಿ
ಗಳಿಕೆಯಿಂದ ನನ್ನ ಅಸ್ತಿತ್ವ

ಕೆಲಸಕ್ಕೆ ತಂದೆ ತಾಯಿಯ ಹೆಸರು
ಬಳಕೆಯಿಂದ ನನ್ನ ಅಸ್ತಿತ್ವ

ಮದುವೆಯ ಮೊದಲು ಮನೆತನದ
ಹೆಸರಿಂದ ನನ್ನ ಅಸ್ತಿತ್ವ

ಹಾಗಿದ್ದರೆ ನನ್ನ ಅಸ್ತಿತ್ವ ಅವಲಂಬಿ
ನನ್ನ ಅಸ್ತಿತ್ವ ಸ್ವಾವಲಂಬಿಯಾಗುವುದು ಎಂದು?
ನನ್ನ ಸ್ವಂತ ಅಸ್ತಿತ್ವದ ಹುಡುಕಾದಲ್ಲಿ ನಾ !!???!!!!

*************************************

# ೨೩. ಹೆಳವನ ಮನಸ್ಸು

ನನ್ನ ಹೆತ್ತವರು ದೇವತಮನುಷ್ಯರು
ಅವರಿಗಿಲ್ಲ ಯಾವ ಹಂಗು
ನನ್ನನ್ನು ಬೆಳೆಸಿದರು ಯಾವ ಪ್ರತಿಪಲವಿಲ್ಲದೆ
ಅವರಿಗಿರಲ್ಲಿಲ್ಲ ನಾ ಹೆಳವನಾಗುವೆನೆಂಬ ಅರಿವು

ಹೆಳವನೆಂದು ಹಳಹಳಿಸಬೇಡವೋ ಮನುಜ
ಹೆಳವನೆಂದು ನನ್ನನ್ನು ಮೂದಲಿಸಬೇಡಿ
ಹೆಳವನಾದರೇನಾಯಿತು ಮಾಡುವ ಕರ್ತವ್ಯವ
ಮಾಡೇಮಾಡುತ್ತೇನೆ
ನಾ ಸ್ವಾವಲಂಬಿಯಾಗಿರುವೆನು

ನಾ ನನ್ನ ಬದುಕನ್ನು ಬದುಕಬಲ್ಲೆ
ನಾ ನನ್ನಗಾದ ಸ್ವ ಉದ್ಯೋಗವ ಮಾಡುವೆನು
ನಿನ್ನಹಾಗೆ ಅವಲಂಬಿಯಲ್ಲ
ನಿನ್ನಹಾಗೆ ಕ್ರೃರತ್ವದ ಮನಸ್ಸು ನನ್ನಲ್ಲಿಲ್ಲ

ನೀ ಕೂಡಾ ಒಂದಲ್ಲ ಒಂದು ರೀತಿಯ ಹೆಳವನೆ
ಅದು ನಿನ್ನ ಅರಿವಿಗೆಬಾರದಿರಬಹುದು
ನಿನ್ನ ಸಮೀಪ ಹೇಳದಿರಬಹುದು
ಆದರೆ ನಿನ್ನ ಬಗ್ಗೆಯೂ ಅಪಹಾಸ್ಯವ ಮಾಡುವರು ನಿನ್ನ
ಅರಿವಿಲ್ಲದೆ...

ನನ್ನ ಸ್ವಾಧೀನ ನನ್ನ ಬಳಿ ಇರುವುದು
ನಾ ಹೆಳವನಾದರೇನಾಯಿತು
ನನ್ನ ಬುದ್ಧಿ ವಿವೇಚನೆಯ ಬಳಸಿ ನಾ ಬದುಕಲು ಶಕ್ತನು
ನನ್ನ ಬಲ ನನ್ನದು ನಾ ಮಾದರಿಯಾಗಿರಲು ಬಯಸುವೆ.....

# ೨೪. ಮನದ ಅಳಲು

ನಾ ಹುಟ್ಟಿದು ಗಂಡಾಗಿ
ಅಲ್ಲರ ಪ್ರೀತಿಯ ಮಗುವಾಗಿ
ಆಟ ಪಾಟದಿ ನಾನೆ ಮೊದಲು
ಆಗ ಆದರೆಲ್ಲರು ಪುಳಕಿತರು

ಬೆಳದೆನು ಮಿತ್ರರೊಡಗೂಡಿ
ಆ ದಿನಗಳ ನಾ ಹೇಗೆ ಮರೆಯಲಿ
ಆ ಸಂತಸದ ಕ್ಷಣವ ನನ್ನ ಎದೆಯ
ಗೂಡಿನೊಳಗೆ ಕಪ್ಪೆಯ ಚಿಪ್ಪಿನ ರೀತಿಯಲ್ಲಿ ಬಚ್ಚಿಟ್ಟು

ಪ್ರಯಾದಿ ನಾ ಅರಿಯದೆ ಮನಸೋತೆ ಹೆಂಗಳೆಯರ
ವಸ್ತ್ರಕ್ಕೆ
ಕಾಲ ಕಳೆದಂದೆ ನನ್ನ ದೇಹಕೃತಿಯು ಬದಲಾಗ
ತೊಡಗಿತು ನನ್ನ ಅರಿವಿಗೆ ಬಾರದೆ
ನಾ ಯಾರ ಬಳಿ ಹೇಳಿಕೊಳ್ಳಲಿ

ನಾ ಆ ಸಮಯದಿ ಪಟ್ಟ ಕಷ್ಟ ಕಾರ್ಪಣ್ಯವ
ನಾ ಸಹಿಸಲಾರದೆ ಅನುಭವಿಸಿದೆ
ಎಲ್ಲ ಹೊಸತನ ನನಗೆ
ಹೊಸ ಅನುಭವ ನನಗೆ

ಆ ಸಮಯದಿ ಬಾಲ್ಯದಿ
ಆಟಾಡಿ ಬೆಳಸಿದ ಮನೆಯವರಿಗೆ ನಾ ಅಸಹ್ಯವಾದೆ
ಮುದ್ದಾಡಿ ಬೆಳಸಿದ ಮನೆಯವರಿಗೆ ನಾ ಬೇಡವಾದೆ
ನನ್ನ ಸ್ನೇಹಿತರಿಗೆ ನಾ ಅಪರಿಚಿತನಾದೆ

ನನಗೆ ಒಡವೆ ವೈಡೂರ್ಯವು ಆಪ್ತವಾದವು
ನನ್ನನ್ನು ನಾನು ಹೊರ ಜಗತ್ತಿಗೆ ಸೌಂದರ್ಯವತಿಯಾಗಿ
ತೋರ್ಪಡಿಸುವ ಹಂಬಲ
ನನ್ನನ್ನು ನಾನು ಚಂದವಾಗಿಸಿಕೊಳ್ಳಲು ಪ್ರಾರಂಭಿಸಿದೆ

ನನ್ನನ್ನು ನಿಮ್ಮಲ್ಲಿ ಒಬ್ಬಳನಾಗಿಸಿಕೊಂಡು ಮುನ್ನಡೆಯಿರಿ
ನನ್ನನ್ನು ನಾ ಇರುವ ರೀತಿ ಸ್ವೀಕರಿಸಿ
ನಾ ಸಾಧಿಸಿ ತೋರಿಸುವೆ
ನನ್ನನ್ನು ಕಾಣದಿರಿ ನಿಕೃಷ್ಟದಿ....

************************************

# ೨೫. ಬಾಲ್ಯ

ನಾಲ್ಕು ಗೋಡೆ ಬಂದಿ ನಾನಾಗಿಹೆನು
ನಾ ಯಾಂತ್ರಿಕ ಉಪಕರಣದ ಮಿತ್ರ
ನನಗಿಲ್ಲ ಜನಸಾಮಾನ್ಯರ ಮುಖ ಪರಿಚಯ
ನನಗೆ ಈ ಸಾಧನಗಳೆ ಎಲ್ಲ

ನನ್ನ ಬಾಲ್ಯವ ಅಪ್ತಮಿತ್ರ ಈ ಸಾಧನಗಳು
ನನಗಿಲ್ಲ ಯಾವುದೇ ಬಾಹ್ಯ ಆಟಿಕೆಗಳ ಪರಿಚಯ
ನಾ ರಜೆಕಳೆಯಲು ಎಂದು ಹೋಗಿಲ್ಲ ಊರಾಚೆ
ನಾಲ್ಕು ಗೋಡೆಯ ಮಧ್ಯೆ ಇರುವುದೆ ನನ್ನ ಪ್ರಪಂಚ

ನಾ ಕಾರ್ಯ ನಿಮ್ಮಿತ್ತ ಊರಿಗೆ ಹೋದರೆ
ಅಲ್ಲಿಯ ಮಕ್ಕಳು ಆಡುವ ಆಟ ನಾ ಎಂದು ಕಂಡು
ಕೇಳಿಲ್ಲ
ಅವರು ಆಡುವರು ಅದ್ಯೆಂತದೊ ಚಿನ್ನಿ ದಾಂಡು
ಲಗೋರಿ ಇನ್ನೂ ಹಲವು ತರತರದ ಆಟ
ನಾ ಅದರನ್ನು ನನ್ನ ಜಂಗಮವಾಣಿಯಲ್ಲಾಗಲಿ
ಗಣಕಯಂತ್ರದಲ್ಲಾಗಲಿ ಆ ಆಡಿಲ್ಲ

ಅವರು ಅಲೆವರು ಕಾಡು ಮೇಡ ಅಂಜಿಕೆ ಇಲ್ಲದೆ
ಸವಿಯುವರು ತರತರದ ಹಣ್ಣು ಹಂಪಲ
ಅದ್ಯೆಂತದೊ ಸಲ್ಲೆಹಣ್ಣು ಹೊಳೆದಾಸಾಲಹಣ್ಣು
ನೇರಳೆಹಣ್ಣು ಕೌಳಿಹಣ್ಣು ಎಲ್ಲವ

ಎಂದಿಗೂ ನನ್ನ ಅರಿವಿಗೆ ಬರಲಿಲ್ಲ
ಇಷ್ಟೆಲ್ಲಾ ವಿಧ ವಿಧದ ಹಣ್ಣು ಹಂಪಲ ಇರುವಿಕೆಯ

ಆ ಊರ ಪೋರರ ಬಾಯಲ್ಲೆ ಕೇಳಿ ಬಲ್ಲೆ ಅಷ್ಟೇ
ಅವರು ಹೇಳಿಹರು ಇನ್ನು ಹಲವಾರು ಜಾತಿಯ ಹೆಸರ

ನಾ ಮರೆತಿಹೆ ಮಾರ್ಗಮಧ್ಯದಿ ಕ್ರಮಿಸುವ ಅವಸರದಿ
ಈಗ ನನ್ನ ಮನ ಮರುಗುತ್ತಿದೆ ನನ್ನ ಇಷ್ಟು ದಿನದ
ಬಾಲ್ಯವ ನೆನೆದು
ನಾ ಕಳೆದೆನು ನನ್ನ ರಜಾವ ಬೇಸಿಗೆ ಶಿಬಿರದಿ
ನನ್ನ ಯಾಂತ್ರಿಕ ಆಟಿಕೆಯೊಂದಿಗೆ...

************************************

# ೨೬. ಜಾತ್ರೆ

ಹೋಗೋಣು ಬಾ ನಮ್ಮೂರ ಜಾತ್ರೆಗೆ
ತೋರಿಸುವೆ ಬಾ ನಮ್ಮೂರ ಜಾತ್ರೆಯಾ
ಎಳ್ಳಾಮವಾಸೆ ದಿವಸ ನೆಡೆಯುವ ಜಾತ್ರೆಯ
ತಾಯಿ ವರದಾಂಬಿಕೆಯ ಸನ್ನಿಧ್ಧಿಯಲ್ಲಿ ನೆಡೆಯುವ
ಜಾತ್ರೆಯ

ಅಲಂಕಾರ ಪ್ರಿಯಳಾದ ಮಾತೆಯ ನೋಡಿ ಬರೋಣು
ಬೇಡಿದ ವರವ ಸಿಧ್ಧಿಸುವ ಮಾತೆಯ ನೋಡಿ ಬರೋಣು
ಸರ್ವ ಮಂಗಳೆಯಾದ ಮಾತೆಯ ನೋಡಿ ಬರೋಣು
ನಮ್ಮೂರ ತಾಯಿಯ ದರ್ಶನದ ಭಾಗ್ಯವ ಪಡೆಯೋಣು

ಮಲಗಂಬವ ನಾ ನಿನಗೆ ತೋರಿಸುವೆ
ತಂಡ ತಂಡಗಳ ನಡುವೆ ನೆಡೆಯುವ ಕೋಲಾಟವ
ನಾ ನಿನಗೆ ತೋರಿಸುವೆ
ಹಳ್ಳಿಯ ಜನಪದ ಕಲೆಯ ಪರಿಚಯವ ನಾ ನಿನಗೆ
ಮಾಡಿಕೊಡುವೆ

ಅಲ್ಲೆ ಬಂದಿರುವ ಅಂಗಡಿಯ ಕಾಲ್ನಡಿಗೆಯಲ್ಲಿ
ಸುತ್ತಿ ಬಲು ಅಪರೂಪವಾದ ವಸ್ತುವ ಕರಿದಿಸೋಣು
ಬಾಯಾರಿಕೆಗೆ ತಂಪಾದ ಪಾನೀಯ ಕುಡಿದು
ಪೇಟೆಯ ತಿಂಡಿ ಒಮ್ಮೆ ಸವಿಯೋಣು
ಹಾಗೆ ಆ ತಾಯಿಯ ಪಾದಕ್ಕೆ ಎರಗಿ ಆರ್ಶೀವಾದ
ಪಡೆಯೋಣು

*************************************

# ೨೭. ಬಣ್ಣ ಬಣ್ಣದ ಕಿವಿ ಓಲೆ

ಬಣ್ಣ ಬಣ್ಣದ ಕರ್ಣಕುಂಡಲ
ವಿಧ ವಿಧದ ಕರ್ಣಕುಂಡಲ
ನೀ ಆರಿಸು ನಿನ್ನ ಇಷ್ಟದ ಕಿವಿ ಓಲೆ
ನಾ ಕೊಡಿಸುವೆ ನಿನ್ನಿಷ್ಟದ ಕಿವಿ ಓಲೆ

ಬಳಿ ಬಣ್ಣದ ಕಿವಿಓಲೆ
ನಿನ್ನ ಕಿವಿಯಲ್ಲಿ ಬೆಳಕ್ಕಿಕೂತಂತೆ ಭಾಸವಾಗುತ್ತದೆ
ಆ ಓಲೆಯ ಅದೃಷ್ಟವೆ ಸರಿ
ನಿನ್ನ ಕವಿಯನ್ನು ಸೇರಿ ರಾರಾಜಿಸಲು

ಕರ್ಣಕುಂಡಲದ ಎಷ್ಟು ಜನ್ಮದ ಪುಣ್ಯದ ಸಂಪಾದನೆಯೊ
ನಿನ್ನ ಕರ್ಣವ ಇಂದು ಸೇರುವ ಭಾಗ್ಯ ಒದಗಲು
ನಿನ್ನಲ್ಲಿರುವ ಒಡವೆ ಮೇಲಿನ ತವಕವು ನಾ ಬಲ್ಲೆ
ಹಾಗಗಿ ನಾ ನಿನ್ನ ಅದರ ಸಂಗಡ ನೋಡ ಬಯಸುವೆ.

ನೀ ಆರಿಸಿ ನಿನ್ನಿಷ್ಟ ಬಣ್ಣದ ಕಿವಿಓಲೆ
ನಿನ್ನ ಕಿವಿಗೆ ಇಲ್ಲಿರಿವುದೆಲ್ಲ ಒಪ್ಪುವುದು
ನೀ ದಿನಾಲು ಹಾಕು ತರತರಹದ ಓಲೆ
ನೀ ಇರದಿರು ಎಲ್ಲವು ಇದ್ದು ಏನು ಇಲ್ಲದಿರುವ ತರ...

************************************

## ೨೮. ಹಚ್ಚ ಹಸಿರು

ಕಣ್ಮನ ಸೆಳೆಯುವ ಹಚ್ಚ ಹಸಿರಾಗಿರುವ
ಭೂಮ್ತಾಯಿ ನಮ್ಮವ್ವ
ಏನ್ ಪಸಂದಾಗಿ ಕಾಣ್ತೆ ನಮ್ಮವ್ವ

ಹಸಿರು ಸಂವೃದ್ಧಿಯ ಸಂಕೇತ
ನೀ ಎಂದಿಗೂ ಹೀಗೆ ಇದ್ದು
ನಮ್ಮೆಲ್ಲರ ಹರಸು ನಮ್ಮವ್ವ

ನಿನ್ನ ಒಡಲು ಎಂದು ತುಂಬಿರಲಿ
ಅದರಿಂದ ನಮ್ಮಂತ ರೈತರ ಒಡಲು ತುಂಬುವುದು
ಎಂದಿಗು ನೀ ಬಿಡದಿರು ನಮ್ಮ ಕೈ

ಹಸಿರು ಕಂದುಬಣ್ಣಕ್ಕೆ ತಿರುಗದಿರಲಿ
ಯಾವ ಕೆಟ್ಟಕಣ್ಣು ನಿನ್ನ ಮೇಲೆ ಬೀಳದಿರಲಿ
ನೀ ಎಂದಿಗು ಹಚ್ಚ ಹಸಿರಾಗೆ ಉಳಿದಿರು

************************************

## ೨೯. ಬದುಕು

ಕನಸೆಂಬ ಎಣ್ಣೆಯ ಎರೆಯುತ್ತಿರಲು
ದೇಹದಿ ಪ್ರಾಣ ಜ್ಯೋತಿ ಬೆಳಗುತ್ತಿರುವುದು
ಎಣ್ಣೆಯ ಜೊತೆ ಬತ್ತಿ ಮುಗಿಯಲು ಜ್ಯೋತಿ ಆರವುದು

ಜ್ಯೋತಿ ಬೆಳಗಲು ಎಣ್ಣೆಯ ಜೊತೆ ಬತ್ತಿಯು ಅತಿ ಮುಖ್ಯ
ಜ್ಯೋತಿ ಬೆಳಗಲಿಸಲು ತನ್ನನ್ನು ತಾನು ಸಟ್ಟುಕೊಳ್ಳುತ್ತದೆ
ಹಾಗೆ ನಮ್ಮ ಹಿತ ಬಯಸುವವರು ಕೂಡ

ಕನಸು ಕಂಡರೆ ಸಲಾದು ಅದರ ನನಸಾಗಿಸಬೇಕು
ಆ ದಾರಿಯಲ್ಲಿ ತೊಡಕುಗಳು ಸಾಮಾನ್ಯ
ಆದರೆ ನಾವು ಜೀವವನ್ನು ತ್ಯಾಗ ಮಾಡದೆ
ಮುಂದುವರಿಯೋಣ

************************************

## ೩೦. ಆಶಯ

ದೇಹದ ಅಂದ ಸವಿಯಲು
ಹಂದಿಯ ಹಾಗೆ ಗುಂಪಿನಲ್ಲಿ ಬಂದು
ಸವಿದು ಆನಂದಿಸಿ ಹೊರನೆಡೆದರು
ಕ್ಷಣಾರ್ಧ ಸುಖಕ್ಕೆ ಬಳಿಯಾಯಿತು ಹೆಣ್ಣು

ಆ ದೇಹದ ಒಡತಿಯ ಆಕ್ರಂದನವು
ಕೇಳಲಿಲ್ಲ ಈ ಕಿವಿಗಳಿಗೆ
ಕಣ್ಣಿದ್ದು ಕುರುಡಾಯಿತು
ಬಾಯಿ ಇದ್ದು ಮೂಖವಾಯಿತು

ಆ ವೇಳೆಯಲ್ಲಿ ಜೊತೆ ಇರಬೇಕಾದವರು
ತಳ್ಳಿದರು ಬಹು ದೂರ ಘಾಸಿಗೊಂಡಿತು ಮನವು
ಅಲ್ಲಿ ಬೇಕಾದದ್ದು ಅರ್ಥಮಾಡಿಕೊಳ್ಳುವ ಮನವು
ಈ ಜಗದಲಿ ಸಿಗಲಿಲ್ಲ ಯಾರು ಆ ಮನಕ್ಕೆ

ತನ್ನ ದೇಹದ ಅಳಲ ಜೊತೆ ಅವಳು ಹೊರಬೇಕಿತ್ತು
ಅವಳ ಜೀವನದ ಭಾರ ಆಗ ಅವಳಿಗೆ ಸಾಕೆನ್ನಿಸಿತು
ಈ ಜೀವನದ ತೇರೆಳೆಯುವ ಕಸಬು

ಈ ದುರ್ಘಟನೆ ನೆನೆದು ಈಗಲೂ ಮರುಗುತ್ತಿಹುದು
ಮನವು
ದುರ್ಘಟನೆ ನೆಡೆದ ಮೇಲು ತನ್ನನ್ನು ತಾನು
ಗುರುತಿಸಿಕೊಳ್ಳುವ ಕಾರ್ಯದಿ ತೊಡಗಿಸಿಕೊಂಡಿಹಳು
ಆ ಪರಿಯೇ ಅಚ್ಚರಿಯು ಹಾಗೂ ಸರಿಯಾದ ಮಾರ್ಗವು
ಧೈರ್ಯ ಶೌರ್ಯದಿ ಮುನ್ನುಗ್ಗು....

## ೩೧. ಮೂಕ ವೇದನೆ

ಕೈ ಬೇಡಿದೆ ಮನ ಬಯಸಿದೆ
ಕಣ್ಣು ಹಂಬಲಿಸಿದೆ ಹೃದಯ ಮಿಡಿದಿದೆ
ನಿನ್ನ ಪ್ರೀತಿಗೆ ಓ ತಾಯಿಯೇ

ನನ್ನ ದುಃಖ ತೋಡಲು
ಕಣ್ಣೀರ ಹನಿಯ ಹೀರಲು
ನಿನ್ನ ಮಡಿಲ ಬಯಸಿದೆ
ನನ್ನ ಮನ ಓ ತಾಯಿಯೇ

ನಿನ್ನ ಜೊತೆ ನನ್ನ ಸಂತಸ ಕ್ಷಣ ಸವಿಯಲು
ನನ್ನ ಆಯಾಸದ ಕ್ಷಣ ಮರೆಯಲು
ನನ್ನ ಮನ ಬಯಸಿದೆ ಓ ತಾಯಿಯೇ

ಕುಷಲೋಪರಿ ಮಾತಾನಾಡಲು
ಇರುವ ಸಮಯ ಸಂತಸದಿ ನಿನ್ನ ಸನಿಹ ಕಳೆಯಲು
ನನ್ನ ಮನ ಬಯಸಿದೆ ಓ ತಾಯಿಯೇ

ನನ್ನ ಹಸಿವ ಸದಾ ನೀಗಿಸುವ
ನನ್ನ ಹಿತಿವ ಸದಾ ಬಯಸುವ
ನನ್ನ ಕೆಲಸಕ್ಕೆ ಹೆಗಲು ಕೊಡುವ
ತನ್ನ ಕಂದನಿಗೆ ಸದ ಮಿಡಿಯುವ ಜೀವವೇ
ನಿನ್ನ ನನ್ನ ಮನ ಬಯಸಿದೆ ಓ ತಾಯಿಯೇ

****************************************

## ೩೨. ನೀನು

ಲೇಖನಿ ನೀನಾದರೆ
ಅದರಲ್ಲಿ ಮೂಡುವ ಅಕ್ಷರನಾನಾಗುವೆ

ನೀ ದೀಪವಾಗಲು
ಎಣ್ಣೆಯೊಳಗಿನ ಬತ್ತಿನಾನಾಗುವೆ

ನೀ ಅಕ್ಷಿಯಾಗಲು
ಅಕ್ಷಿಪಟಲ ನಾನಾಗುವೆ

ನೀ ಅಂಗುಷ್ಠವಾಗಲು
ತೊಡುವ ಉಂಗುರ ನಾನಾಗುವೆ

ನೀ ಕಾಲಗಲು
ನಾ ಕಾಲ್ಗೆಜ್ಜೆಯಾಗುವೆ

ನೀ ಹೃದಯವಾಗಲು
ಅದರ ಬಡಿತ ನಾನಾಗುವೆ

ನೀ ಏಣಿಯಾಗಲು
ಅದರ ಮೆಟ್ಟಿಲು ನಾನಾಗುವೆ

ನೀ ಮನೆಯ ಕದವಾಗಲು
ಕದದಲ್ಲಿರುವ ಚಿತ್ತಾರ ನಾನಾಗುವೆ

ನೀ ಜಗದ ರಾತ್ರಿಯಾಗಲು
ಮೂಡುವ ಚಂದಿರ ನಾನಾಗುವೆ.

ನೀ ಮುತ್ತಿನ ಹಾರವಾಗಲು
ಹಾರದ ದಾರ ನಾನಾಗುವೆ.

***********************************

## ೩೩. ಆಧುನಿಕತೆ

ತ್ವರಿತಗತಿಯಲಿ ಸಾಗುತಿಹರಿಂದಿನ ಯುವ ಪೀಳಿಗೆ
ತೀರದ ಬಯಕೆಯ ಬಯಸಿ ಬಯಸಿ ಮುದುಡಿದೆ ಮನ
ಬದುಕಲ್ಲಿರುವ ಸಮಸ್ಯೆಗಳ ಅಲೆಯ ನೆನೆ ನೆನೆದು
ಕೊರಗಿದ ಮನ
ಕಮರಿದ ಕನಸ ನೆನೆ ನೆನೆದು ತೇವವಾಗಿದೆ ಕಣ್ಣುಗಳು

ಪ್ರಕೃತಿಯ ಸೌಂದರ್ಯವ ಬಳಸುವರು
ಪ್ರಕೃತಿಯ ಸೌಂದರ್ಯವ ಸವಿಯುವರು
ಪ್ರಕೃತಿಯ ಸಂರಕ್ಷಿಸಲಾರರು
ಇದು ನಿಮ್ಮ ಹೊಣೆಯೇ ಅಲ್ಲವೆ?

ದೀರ್ಘಾವಧಿಯ ತಾಳ್ಮೆಲ್ಲ
ಸಂಬಂಧದ ಗೌಜೆ ಬೇಕಾಗಿಲ್ಲ
ಆಧುನಿಕತೆಯಲ್ಲಿ ಮೆರೆಯುತಿಹರು
ಆಧುನಿಕತೆಯಲ್ಲೇ ಮರೆಯುತಿಹರು

***********************************

# ೩೪. ಕವಿ ಕಲ್ಪನೆ

ಹೇಳಲೇಬೇಕಾದ ಸಂಗತಿಗಳು ನೂರು ನೂರಾರು
ನೂರು ನೂರಾರು ಸಂಗತಿಯ
ಕಾಣದ ಕಣ್ಣುಗಳು ನಮ್ಮನ್ನೆ ದಿಟ್ಟಿಸಿ ದಿಟ್ಟಿಸಿ ನೋಡಿದಾವೆ
ಇಜ್ಜಿಲು ಒಲೆ ಕಾಣದಂತಾಗಿದೆ
ಹಂಡೆಯ ನೀರನು ಕುದಿಸಲು ಸ್ಥಳವಿಲ್ಲ

ಅಧುನಿಕತೆಯು ಭರದಿಂದ ಇಂದಿನ ಜನರ ನಡುವೆ
ಸವಾರಿಯು ತನ್ನಷ್ಟಕ್ಕೆ ತಾನೇ ಸವಾರಿಯು ಮಾಡುತಿಹುದು
ಅದ ತಡೆಹಿಯುವವರು ಯಾರು
ಎಲ್ಲಿದೆ ನಮ್ಮ ಪೂರ್ವಜರು ಮಾಡಿಟ್ಟ ಶಾಸ್ತ್ರ ಸಂಪ್ರದಾಯ

ಆಡಂಬರದ ಜೀವನಕೆ ಮಾರು ಹೋಗಿ
ಸಂಬಂಧದ ನೆಲೆಗಟ್ಟು ಇಂದು ಗಟ್ಟಿಯಿಹುದೆ?
ಕೃತಕ ಸೌಂದರ್ಯಕ್ಕೆ ಮಾರು ಹೋಗಿ
ಮಾರಣಾಂತಿಕ ಕಯಿಲೆಯ ಆಹ್ವಾನಿಸುತಿಹರೆ?

ಮಡಿಮೌಲಿಗೆಯ ಅಧುನಿಕತೆಯ ಬಾಂಡಲಿಯಲಿ ಹಾಕಿ
ಸುಟ್ಟು ಬೂದಿಮಾಡಿದರೆ
ನೈಸರ್ಗಿಕ ಕತೆ ತನ್ನ ಸ್ಥಾನವ ಕಳೆದುಕೊಂಡಿತೆ
ಕೃತಕ ಮಾನವ ನಿರ್ಮಿತ ತನ್ನ ಅಟ್ಟಹಾಸವ ಮೆರೆದಿತೆ

ಕ್ಷಣಿಕ ಸುಖಕ್ಕಾಗಿ ತನ್ನ ಜೀವನವ ಮುಡಿಪಾಗಿಟ್ಟರೆ?
ಕಾಂಚಣದ ವ್ಯಾಮೋಹದ ಬಲೆಗೆ ಬಿದ್ದು
ತನ್ನ ಸರ್ವಸ್ವವನೆ ಬಲಿಕೊಟ್ಟರೆ?
ಆಧುನಿಕ ಯಂತ್ರಕೆ ತಮ್ಮನ್ನು ತಾವು ಅಡವಿಟ್ಟುಕೊಂಡರೆ?

ಕೂಡುಕುಟುಂಬದ ಅರಿವೆಯಿಲ್ಲ
ತಾನು ಅವನು ತಮ್ಮಗೊಬ್ಬರು ಎಂಬಂತೆ ಬಾಳುತಿಹರು
ಖಗ ಮೃಗಗಳ ಸಹವಾಸವೇಯಿಲ್ಲ
ಗಿಡ ಮರಗಳಗಳ ಪರಿಚಯವೇಯಿಲ್ಲ

ಕಾಡುಮೇಡಾಲೆಯುವ ದಾರಿಯು ಗೊತ್ತಿಲ್ಲ
ಅಂತವರ ಸತ್ಸಂಗವ ಮಾಡಿ ತಿಳಿದಿಲ್ಲ
ಮುಖವಾಡದ ಬುದುಕೊಂದೆ ಗೊತ್ತಿಹುದು ಇಂದಿನವರಿಗೆ
ಮರುಗದಿರು ಓ ಮನವೆ

************************************

## ೩೫. ಹೆತ್ತಮ್ಮ

ನಿನ್ನ ಕೈ ಅಮೃತ ಹಸ್ತ
ಆ ಹಸ್ತದಿ ನೀಡಿದ ಎಲ್ಲವೂ ಅಕ್ಷಯವೇ
ನನ್ನ ಬಾಳಿನ ದೈವಸ್ವರುಪಿ

ನಿನ್ನ ಪಾದಗಳು ಪಾದರಸದಂತೆ
ಎಂದು ನಿಲ್ಲದ ಗಡಿಯಾರದಂತೆ
ನೀ ಮಾಡುವ ಕಾರ್ಯಕೆಲಸ ಬಹಳ ಅಚ್ಚಕಟ್ಟು

ನಿನ್ನ ಕೈಯಾರೆ ಮಾಡಿದ ರವೆಉಂಡೆಯ ನಾ ಹೇಗೆ
ಮಾರೆಯಲು ಸಾಧ್ಯ
ನನಗೆ ಪ್ರಿಯವೆಂದು ನೀ ಮಾಡಿಟ್ಟ ಹೊರಣದ ಹೋಳಿಗೆ
ವ್ಹಾ
 ನಿನ್ನ ಅಕರೆಯೆಂಬ ಪಾಕದಿ ಮಾಡಿಟ್ಟ ಜಮೂನು
ಸವಿಯಲು ಎಷ್ಟು ಸೊಗಸು
ಆ ರುಚಿಯ ನಾ ಹೇಗೆ ಬಣ್ಣಿಸಲಿ

ನಾ ಸುಸ್ತಾದ ಸಮಯದಲಿ ನಿನ್ನ ಮಡಿಲೆ ನನಗೆ
ಜೋಲಿ(ತೊಟ್ಟಿಲು)
ನನ್ನ ಕೋಪವ ಶಮನ ಮಾಡುವ ಶಾಂತಮೂರ್ತಿ ನೀನು
ನನ್ನ ಬಾಳಿನ ಏಳಿಗೆಗೆ ಕಾರಣಿಬೂತಳು ನೀ

************************************

## ೩೬. ಹಾಗೆ ಸುಮ್ಮನೆ

ಬರಿದಾಗದಿರಲಿ ಎಂದು ನಿನ್ನ ಒಡಲು
ಎಂದೆಂದಿಗೂ ಹಸ್ನಮುಖಿಯಾಗಿರು
ಏಕ ಕಾಲದಿ ಬಹುಕಾರ್ಯಾರ್ತಿ

ಮುಂಜಾನೆ ಎದ್ದೊಡನೆ ಹಕ್ಕಿಯ ಕಲರವ ಆಳಿಸುತ್ತ
ತನ್ನ ದೈನಂದಿನ ಕಾರ್ಯದಿ ತನ್ನನ್ನು ತಾ
ತೊಡಗಿಸಿಕೊಂಡು
ಎಂದಿಗೂ ಪ್ರತಿಫಲವ ನಿರೀಕ್ಷಿಸದೆ ಪಾದರಸದಂತೆ
ಓಡಾಡುತ್ತ
ಎಲ್ಲರ ಯೋಗಕ್ಷೇಮದ ಬಗ್ಗೆ ಮುತುವರ್ಜಿಯ ವಹಿಸುವ
ದೇವತೆ

ಚಿರಕಾಲ ಬಾಳು ನನ್ನ ದೇವತೆ
ಸುಖವಾಗಿ ಬಾಳು ನನ್ನ ದೇವತೆ
ಒಟ್ಟಾಗಿ ಬಾಳೋಣ ಬಾ ನನ್ನ ದೇವತೆ

*************************************

## ೩೭. ಮನಸ್ಸೆಂಬ ಹೂ

ಮನಸೊಂದು ಹೂ
 ಅರಳುವ ಸಮಯದಿ ಸೂಸುವ ಪರಿಮಳ
ಎಲ್ಲೆಡೆ ಹರಡುವುದು ಘಮವಾದ ಸುವಾಸನೆ
ಅರಳುವ ಸಮಯವ ಕಣ್ತುಂಬಿಕೊಳ್ಳಬೇಕೆಂಬ ಬಯಕೆ
ನನ್ನದು

ಅರುಳುವ ಸಮಯವು ಎಷ್ಟು ಸೋಜಿಗವೊ
ಮುದುಡುವ ಸಮಯವು ಅಷ್ಟೇ ಬೇಸರ....
ಮುದುಡಿದರೆ ನೋಡಲಾಗದು ಕಷ್ಟ ಹೇಳತೀರದು

ಅರಿಳಿದಾಗ ಮಕರಂದ ಹೀರಲು ದುಂಬಿಗಳ ಸಾಲು
ಸಾಲು ಮುದುಡಿದಾಗ ಯಾರು ಬರಳಾರರು....

************************************

# ೩೮. ರಂಗೋಲಿ

ರಂಗು ರಂಗಿನ ರಂಗೋಲಿ
ಹಸ್ತದಿ ಮೂಡಿದ ರಂಗೋಲಿ
ದೇವರ ಎದರು ಮೂಡಿದ ರಂಗೋಲಿ
ಒಳ ಹೊರಗು ತರತರ ಬಣ್ಣ ತುಂಬಿದ ರಂಗೋಲಿ

ಮನಸ್ಸಿಗೆ ಮುದ ನೀಡುವ ಚಿತ್ತಾರ
ಎಲ್ಲರ ಕಣ್ಮನ ಸೆಳೆಯುವ ಚಿತ್ತಾರ
ಮನಗೆ ಭೂಷಣ ತರುವ
ಮನೆಯವರ ಶೋಭೆಯ ಹೆಚ್ಚುವ ರಂಗೋಲಿ

ಈ ಯುಗದಲಿ ಕಣ್ಮರೆಯಾಗುತಿಹ
ಎಲ್ಲವೂ ಯಾಂತ್ರಿಕೃತವಾಗಿಹ
ಮುದುವ ಕಳೆಯುತಿಹುದು ಇಂದಿನ ಯಾಂತ್ರಿಕ ಬದುಕು

**********************************

## ೩೯. ಮನ

ಬೇಸರಿಸದಿರು ಮನವೆ
ನಿನ್ನ ಬೇಸರದ ಕ್ಷಣವು ಕ್ಷಣಿಕ
ಬೇಸರದ ಗಳಿಗೆಯ ಮರೆಮಾಚುವುದು
ಜೀವನದ ಸಂತೋಷವೆಂಬ ಗಳಿಗೆಯು

ನಿನ್ನ ಮೊಗದಲಿ ಸದಾ ಸಂತೋಷವಿರಲಿ
ಜೀವನದ ಪ್ರತಿಕ್ಷಣವು ಆನಂದ ತುಂಬಿರಲಿ
ಮುಗಿಲಲಿ ಕಾರ್ಮೋಡ ಕವಿದು
ಮಳೆಯು ಇಳೆಗೆ ಇಳಿದರೆ ಅರ್ಥಪೂರ್ಣ

ಹಾಗೆ ಮನದಲಿ ಬೇಸರವೆಂಬ ಕಾರ್ಮೋಡ ಕವಿದು
ಸಂತೋಷದ ಸಿಂಚನ ಮನದಲಿ ಮೂಡಿದರೆ
ಅರ್ಥಪೂರ್ಣ

************************************

# ೪೦. <u>ಕವಿ ಕಲ್ಪನೆ</u>

ನಾರಿ ನಿನ್ನ ಈ ತೊಡುಗೆಯಿಂದ ನೀ ಎಷ್ಟು
ಮನೋಹರವಾಗಿ ಕಾಣ್ಣುತ್ತಿರುವೆ ಈ ನನ್ನ ನಯನಗಳಿಗೆ
ನಿನ್ನ ಅಂತರಂಗ ಬಹಿರಂಗ ಸೌಂದರ್ಯಕ್ಕೆ ಇದು ಕನ್ನಡಿ
ಎಂಬಂತೆ

ನಾರಿ ನೀ ನೀಡಬೇಡ ದಾರಿ
ನಿನ್ನ ದೇಹದ ಮೇಲಿನ ದೌರ್ಜನ್ಯಕ್ಕೆ
ಇದಕ್ಕೆಲ ಕಾರಣ ಇಂದಿನ ಅಧುನಿಕರುಣ
ನೀ ಅದನ್ನು ಹೆತ್ತಲು ಓಡಬೇಡ ಅದರ ಹಿಂದೆ

ಮೊದಲೆಲ್ಲ ನಿನಗೆ ಇದರೆ ಉದ್ದದ ಕೇಶ
ಕೊಂಡಾಡುತ್ತಿದ್ದರು ಹಾಗೆ ಬೇಡುತ್ತಿದ್ದರು
ದೇವರನ್ನು ನನಗು ಕರುಣಿಸು ಇಂತಹ
ನಾರಿಯರ ಸೌಂದರ್ಯ ಹೆಚ್ಚಿಸುವ ಕೇಶ

ನೀಲಾ ಕೇಶವ ಬಳಸಿ ಒಬ್ಬರಿಗೊಬ್ಬರು
ಹೆಣೆದುಕೊಳ್ಳುತ್ತಿದ್ದರು ಜಡೆಯ
ಆ ಹೆಣೆದ ಜಡೆಯ ಮಧ್ಯದಿ
ಮುಡಿದುಕೊಳ್ಳುತ್ತಿದ್ದರು ಕಂಪುಸೂಸುವ
ಪರಿಮಳ ಭರಿತ ಮಲ್ಲೆ ಹೂ ದಂಡೆಯ

ಈಗಿನ ಆಧುನಿಕತೆಯ ಬದುಕಿನಲ್ಲಿ
ಮರೆಯುತಿಹರು ಎಲ್ಲವ
ಇಗಿನವರಿಗೆ ತಮ್ಮ ಆಂತರಿಕ ಸೌಂದರ್ಯಕಿಂತ
ಬಾಹ್ಯ ಸೌಂದರ್ಯವೇ ಅತಿಮುಖ್ಯ

ಬಾಹ್ಯ ಸೌಂದರ್ಯವ ತೋರ್ಪಡಿಸುವ
ಭರದಲ್ಲಿ ಬಳಸುವರು ಹಲವಾರು ಉಪಕರಣವ
ನೀ ಬಳಸು ಆದರೆ ಅತಿಯಾದರೆ
ಅಮೃತವು ವಿಷವಾಗುವುದು

ನೀ ಹಾಕುವ ಉಡುಪಿನ ಮೇಲೆ ಗಮನವಿರಲಿ
ನಿನ್ನ ಉಡುಪಿನ ಮೇಲೆ ನಿನ್ನ ವ್ಯಕ್ತಿತ್ವ ಅಳೆಯುವರು
ನೀ ಪೇಳಬಹುದು ಅದು ನೋಡುವವರ ನೋಟದ
ಮೇಲೆ ನಿರ್ಧಾರಿತವೆಂದು
ಆದರೆ ಕನಿಷ್ಟ ಪ್ರಜ್ಞೆ ನಿನ್ನಲ್ಲಿ ಇರಬೇಕು..

ನೀ ಉಡುವ ತೊಡುವ ವಸ್ತ್ರ
ನಿನ್ನನ್ನು ಆಹ್ವಾನಿಸುವಂತಿರಬಾರದು
ಆ ತೊಡುಗೆಯನ್ನು ನೋಟು
ನಿನ್ನನ್ನು ಗೌರವಿಸುವಂತ್ತಿರಬೇಕು

ಅಧುನಿಕತೆಯ ಭರದಲ್ಲಿ
ನಿನ್ನನ್ನು ನೀ ನೂಕಿಕೊಳ್ಳಬೇಡ
ವಿನಾಶದ ಅಂಚಿಗೆ
ನೀ ಇಡುವ ಹೆಜ್ಜೆ ಅರಿತು ಇಡು

ನಾರಿ ನೀ ಸಕಲ ವಿದ್ಯೆಯಲ್ಲಿ ಪ್ರಾವೀಣ್ಯತೆಯ ಹೊಂದು
ಪ್ರತಿ ಕ್ಷೇತ್ರದಲ್ಲೂ ನೀನೆ ಮುಂಚೂಣಿಯಲ್ಲಿರು
ಆದರೆ ಎಂದಿಗೂ ಮರೆಯಬೇಡ ನೀ ನಾರಿಯೆಂದು

**************************************

# ೪೧. ಬರವಣಿಗೆ

ನನ್ನ ಬರವಣಿಗೆಯ ಮೊದಲ ಪತ್ರ
ನಿನ್ನ ತಲುಪಿತು ನಾ ಹೆತ್ತನೆ ತರಗತಿಯಲ್ಲಿ ಇರಲು
ಅಂದು ನೀ ಕೊಟ್ಟ ಉತ್ತರ ಸಮಂಜಸವೆ?
ಆ ನಿನ್ನ ಉತ್ತರಕ್ಕೆ ನನ್ನ ಮನಸ್ಸು ಕ್ಷಣಾರ್ಧದಲ್ಲಿ
ವಿಚಲಿತಗೊಂಡಿತು

ಮುಗ್ಧ ಮನಸ್ಸಿಗೆ ಅಂದು ಏನು ಅರಿವಿರಲಿಲ್ಲ
ಜಾತಿ ಅಂತಾರ್ಜಾತಿ ಎಂಬ ಬೇದವಿರಲಿಲ್ಲ
ಆ ಕ್ಷಣವ ಇಂದು ನೆನೆದರೆ ಮನಸ್ಸಿನ ಮೂಲೆಯಲ್ಲಿ
ಒಂದು ಮಂದಹಾಸ ಮೂಡುವುದು

ಆ ಘಟನೆ ಇಂದು ನೆಡೆದ್ದಿದರೆ ಕಲಹವೇ
ನೆಡೆದುಹೋಗುತ್ತಿತ್ತೇನೊ
ಅಥವಾ ಕಲಹ ನಡೆಯುತ್ತಿರಲಿಲ್ಲವೇನೊ
ಗೊತ್ತಿಲ್ಲ ನನಗೆ ಈಗ ಈ ಪ್ರಶ್ನೆಗೆ ಉತ್ತರಿಸಲು
ನಿ ಸಿಗುವುದಿಲ್ಲ ನನಗೆ

ಅದೇನೆಂದರೆ ಅಂದು ನೆಡೆದ ಘಟನೆಯಿಂದ
ನಾ ಲೇಖನಿಯ ಹಿಡಿದೆ ಇಂದು ನನ್ನ
ಈ ವಾಸ್ತವಕ್ಕೆ ನಿನ್ನ ಇರಿವಿಲ್ಲದೆ ನೀನೆ ಕಾರಣವಾದೆ
ನನ್ನ ಜೀವನ ಪಥದಲ್ಲಿ ಏಳಿಗೆ ಕಾರಣ ನೀ

************************************

## ೪೨. ಕವಿ ಕಲ್ಪನೆ

ಕೇಶರಾಶಿ ನೀನೆಷ್ಟು ಸುಂದರ
ನಿನ್ನ ನುನುಪಾದ ಸೌಂದರ್ಯಕ್ಕೆ
ಮಾರುಹೋಗದಿರುವವರು ಯಾರು?
ನಿನ್ನ ಕಾಪಾಡಿಕೊಳ್ಳಲು ನಾ ಪಟ್ಟ ಪಾಡು ಅಷ್ಟಿಷ್ಟಲ್ಲ

ನಿನ್ನ ನೀಲವಾದ ನಿಲುವನ್ನು ನೋಡುವುದೆ ಒಂದು
ಸೋಜಿಗ
ನಿನ್ನ ಲಾಲನೆ ಪಾಲನೆ ಮಾಡಿದಷ್ಟು ಮುಗಿಯದು
ಆ ಸಮಯದಿ ಸಿಗುವ ಸಂತಸ ನಾ ಹೇಗೆ ಬಣ್ಣಿಸಲಿ
ನಿನ್ನ ವರ್ಣನೆಗೆ ಪದಗಳೆ ಸಾಲದು

ನಿನ್ನ ಪಡೆದವರು ಪುಣ್ಯವಂತರು
ಪಡೆಯದವರು ನಿನಗಾಗಿ ಹಪಹಪಿಸುತ್ತಿದಾರೆ
ಆ ಕೇಶರಾಶಿಯಲ್ಲಿ ಮುಡಿಯ ಕಟ್ಟಿ
ಆ ಮುಡಿಗೊಂದು ಒಂದು ಮೊಳ ಮಲ್ಲಿಗೆ ಮುಡಿದರೆ

ಆ ಮುಡಿಗೆ ಮಲ್ಲೆ ಅಂದವ ಅಥವಾ ಮಲ್ಲೆಗೆ ಮುಡಿ
ಅಂದವ
ತಿಳಿದವರು ತಿಳಿಸಿ ನನ್ನವಳಗೆ ಅವಳೆನ್ನ ಮುದ್ದು
ಏಕೆಂದರೆ ನನ್ನವಳು ಇನ್ನು ಚಿಕ್ಕವಳು ಅವಳಿಗೆ ಇದರ
ಅರಿವಿಲ್ಲ...

*************************************

## ೪೩. <u>ಕವಿ ಕಲ್ಪನೆ</u>

ಪರಿಶುದ್ಧ ಮನಸಲಿ ಎಷ್ಟು ವಿಚಾರಾಡಗಿದೆ
ಈ ಪುಟ್ಟಕಂದನ ಪುಟ್ಟ ಕರದಲಿ ಮನೆಯ ದೀಪಬೆಳಗುವ
ಸಮಯ ಸನಿಹವಾಗಿದೆ
ಚೆಂದದ ಸೀರೆಯನ್ನುಟ್ಟು ಸೊಂಟಕೆ ಡಾಬನು ಬಿಗಿದು
ಕಿವಿಗೆ ಕಿವಿ ಓಲೆಯ ತೊಟ್ಟು ಮನದಲ್ಲಿರುವ ತುಡಿತವ
ಹಿಮ್ಮೆಟ್ಟಿ ತನ್ನವನ್ನು ಕಾಣುವ ದಾರಿಯನ್ನು
ಎದರುನೋಡುತ್ತ

ತಲೆಗೆ ಮಲ್ಲಿಗೆ ದಂಡೆಯ ಮುಡಿದು ಜೊತೆಗೆ ಗುಲಾಬಿ
ಹೂಗಳ ದಂಡೆಯು ಸೇರಿ
ಎರಡರ ಪರಿಮಳ ಮನೆಯ ಆವರಿಸಲು
ಕೈಯಲಿ ಮದರಂಗಿಯ ಕೆಂಪು
ಜೊತೆಗೆ ಬಳೆಗಳ ಸದ್ದು
ಮುಡಿಗೆ ಚೌರಿಯ ಬಿಗಿದು
ಮದುಮಗಳೆಂಬ ಭಾವದಿ
ದಾರಿಯ ಕಾದಿಹಲು ಕುವರಿ

ಈ ಸಂತಸ ಕಾತರ ಸದಾ
ನಿನ್ನ ಬಾಳ ಜೊತೆಯಲಿ ಎಂದಿಗೂ ಇರಲಿ
ನವ ನವೀನ ಹಾದಿಯಲಿ ಈ ನಿಂತಿರುವೆ
ಶುಭವಾಗಲಿ ಸಂತಸಕೂಡಿರಲಿ

***********************************

## ೪೪. ನಾ ಕಂಡ ಸ್ಥಳ

ಶಾರದೆ ದಯತೋರದೆ
ಮಲೆನಾಡ ತಪಲಲಿ
ತಂಗಾತೀರದ ದಂಡೆಯ ಸೊಬಗಲಿ
ನೆಲೆಯೂರಿ ಎಲ್ಲರ ಹರಸುತಿಹ
ಶಾರದೆ ದಯತೋರದೆ

ಅರಿಶಿನ ಕುಂಕುಮಾಂಕಿತೆ ಶುಶೋಭಿತೆ
ಎಲ್ಲ ಭಕ್ತರ ಹರಕೆಯ ಸ್ವೀಕರಿಸುವವಳೆ
ತಂಗಾತೀರದ ದಂಡೆಯ ಸೊಬಗಲಿ
ನೆಲೆಯೂರಿ ಇವಳೆ ಇವಳೆ ಶೃಂಗೇರಿ ಶಾರದೆ

ನವರಾತ್ರಿಯ ದಶಮಿಯೆಂದು ಅಕ್ಷರಾಭ್ಯಾಸವ
ಮಾಡಿಸುವ ಪುಣ್ಯಸ್ಥಳವಿದು
ಸಾವಿರಾರು ಜನಕೆ ದಿನನಿತ್ಯ ಅನ್ನ ದಾಸೋಹ ನೆಡೆಯುವ
ಪುಣ್ಯಸ್ಥಳವಿದು
ಭಕ್ತಿ ಶ್ರದ್ಧೆಯು ಮೂಡುವ ಪುಣ್ಯಸ್ಥಳವಿದು

************************************

## ೪೫. ರಾಜ್ಯೋತ್ಸವ

ನೋಡಬನ್ನಿರೊ ಕೊಂಡಾಡಬನ್ನಿರೊ
ನಮ್ಮ ರಾಜ್ಯದೊಳಗೆ ನೆಡೆಯುವ
ರಾಜ್ಯದ ಉತ್ಸವವ ಅದವೇ ಕನ್ನಡ ರಾಜ್ಯೋತ್ಸವವ

ರಾಜ್ಯದ ಮೂಲೆ ಮೂಲೆಯಲ್ಲ ಉತ್ಸವದ
ಸಂಭ್ರಮ ಸಡಗರವ ಒಟ್ಟಾಗಿ ಸೇರಿ ಆಚರಿಸುವ ಬನ್ನಿ
ಕಣ್ತುಂಬಿಕೊಳ್ಳುವ ಬನ್ನಿ
ಬೇಗ ಬೇಗ ಬನ್ನಿ ನಿಮ್ಮವರನ್ನು ಕರೆತನ್ನಿ

ನೋಡಬನ್ನಿರೊ ಕೊಂಡಾಡಬನ್ನಿರೊ
ನಮ್ಮ ರಾಜ್ಯದೊಳಗೆ ನೆಡೆಯುವ
ರಾಜ್ಯದ ಉತ್ಸವವ ಅದವೇ ಕನ್ನಡ ರಾಜ್ಯೋತ್ಸವವ

ಜೈ ಜೈ ಅನ್ನಿ ಕನ್ನಡಾಂಬೆಗೆ ಜೈ ಅನ್ನಿ
ಅಂದು ಇಂದು ಎಂದು ಜೈ ಜೈ ಅನ್ನಿ
ಕನ್ನಡಾಂಬೆಗೆ ಜೈ ಅನ್ನಿ

ನಮ್ಮನ್ನು ಸಲಹುವ ಕನ್ನಡಾಂಬೆಗೆ ಶರಣುಯನ್ನಿ
ಸಿಕ್ಕ ಅವಕಾಶವ ಕನ್ನಡಾಂಬೆಗೆ ಸೇವೆಗೆ ಬಳಸಿ
ಜೈ ಜೈ ಅನ್ನಿ ಕನ್ನಡಾಂಬೆಗೆ ಜೈ ಅನ್ನಿ

************************************